ಜನಪ್ರಿಯ ವಿಜ್ಞಾನ ಮಾಲೆ

# ಅಳಿವಿನಂಚಿನಲ್ಲಿರುವ ಭಾರತೀಯ ಪ್ರಾಣಿಗಳು ಮತ್ತು ಅವುಗಳ ಸಂರಕ್ಷಣೆ

**ಎಸ್. ಎಮ್. ನಾಯರ್**

ಅನುವಾದ

**ನಾಗೇಶ ಹೆಗಡೆ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

**ಮುಖಪುಟ ಚಿತ್ರ:** ನೀಲಗಿರಿ ತಾಹ್ರ್: ಮುಖೇಶ್ ಬರದ್ ಅವರ ಚಿತ್ರ

**ಚಿತ್ರಗಳಿಗೆ ಕೃತಜ್ಞತೆಗಳು:** ಮುಖೇಶ್ ಪಂಚಾಲ್, ಮುಖೇಶ್ ಬರದ್,ಡಿ.ಎಂ. ತುಂಬರ್, ಮುಖೇಶ್ ಆಚಾರ್ಯ, ಸೈಲೇಶ್ ಭಲಾನಿ – ಸೆಂಟರ್ ಫಾರ್ ಎನ್‌ವೈರ್ಮೆಂಟ್ ಎಜುಕೇಶನ್, ಅಹಮದಾಬಾದ್

**ವರ್ಣಚಿತ್ರಗಳು:** ದೆಹಲಿಯ ನ್ಯಾಷನಲ್ ಮ್ಯೂಸಿಯಂ ಆಫ್ ನ್ಯಾಚುರಲ್ ಹಿಸ್ಟರಿ ಅವರ ಕೃಪೆ.

**ಛಾಯಾಚಿತ್ರಣ:** ಇ. ಹನುಮಂತರಾವ್, ಕೈಲಾಶ್ ಸಂಕಾಲ, ಎ.ಜೆ.ಟಿ. ಜಾನ್‌ಸನ್, ಮನೋಜ್ ಧೋಲಾಕಿಯ, ರಾಜಶ್ರೀ ಸಾರಾಭಾಯಿ, ಆರ್.ಕೆ. ಗೌರ್, ಡಾ. ವೆಂಕಟ್, ಜಗದೀಪ್ ರಾಜಪುತ್, ಕೆ.ಜೆ. ಚುಗ್, ಖಲೀದ್ ಘನಿ.

ISBN 81-237-1156-5

---

ಮೊದಲ ಮುದ್ರಣ: 1994 (ಶಕ 1916)



**ರೂ. 26.00**

**Endangered Animals of India and their conservation (Kannada)**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಎ–5, ಗ್ರೀನ್ ಪಾರ್ಕ್, ಹೊಸದೆಹಲಿ – 110016 ಇವರಿಂದ ಪ್ರಕಟಿತ.

---

# ಪರಿವಿಡಿ







# ಪ್ರಸ್ತಾವನೆ

ಭಾರತದ ಅಪರೂಪದ ಮತ್ತು ಅಳಿವಿನಂಚಿಗೆ ಬಂದ ಪ್ರಾಣಿಗಳ ಬಗ್ಗೆ ಹಾಗೂ ಅವುಗಳನ್ನು ಸಂರಕ್ಷಿಸಬೇಕಾದ ಅಗತ್ಯದ ಬಗ್ಗೆ ಜನಜಾಗೃತಿ ಮೂಡಿಸುವ ಉದ್ದೇಶದಿಂದ ಈ ಗ್ರಂಥವನ್ನು ಸಿದ್ಧಪಡಿಸಲಾಗಿದೆ. ಎಲ್ಲರಿಗೂ ತಿಳಿಯುವಂತೆ ಸರಳ ಭಾಷೆಯಲ್ಲಿ ಅಗತ್ಯ ಮಾಹಿತಿಗಳನ್ನು ಒದಗಿಸುವ ಪ್ರಯತ್ನ ಇಲ್ಲಿದೆಯಾದರೂ ಕೆಲವೆಡೆ, ವಿಶೇಷವಾಗಿ ಮೂರನೆಯ ಅಧ್ಯಾಯದಲ್ಲಿ ಪ್ರಾಣಿಗಳ ಚಹರೆ ಕುರಿತ ವಿವರಗಳು ಕೆಲವರಿಗೆ ಕ್ಲಿಷ್ಟವೆನಿಸಬಹುದು. ಕಣ್ಣಾರೆ ನೋಡಲಾಗದ ಪ್ರಾಣಿಗಳನ್ನು ಮನಸ್ಸಿನಲ್ಲೇ ಊಹಿಸಿಕೊಳ್ಳಲು ಅಗತ್ಯವಾದ ಸ್ಥೂಲ ಲಕ್ಷಣಗಳನ್ನಷ್ಟೇ ಇಲ್ಲಿ ಕೊಡಲಾಗಿದ್ದು, ಇವಿಷ್ಟನ್ನೇ ಆಧರಿಸಿ ಓದುಗರು ವನ್ಯಪ್ರಾಣಿಗಳನ್ನು ಗುರುತಿಸಲೆಂಬ ಉದ್ದೇಶ ಇಲ್ಲಿಲ್ಲ.

ಸಸ್ಯ, ಪ್ರಾಣಿ ಮತ್ತು ಜೀವ ಮಂಡಲಗಳ ರಕ್ಷಣೆಗೆಂದು ನಿಸರ್ಗಧಾಮಗಳನ್ನು ನಿರ್ಮಿಸಲಾಗಿದೆ; ಸಂಕುಲನಾಶದ ಅಪಾಯಕ್ಕೆ ತುತ್ತಾದ ಮೃಗಗಳ ರಕ್ಷಣೆಗೆಂದು ವಿಶೇಷ ಯೋಜನೆಗಳು ಜಾರಿಗೆ ಬಂದಿವೆ; ವನ್ಯರಕ್ಷಣೆಯ ಕಾನೂನುಗಳೂ, ಕಾವಲು ಸಂಸ್ಥೆಗಳೂ ಅಸ್ತಿತ್ವಕ್ಕೆ ಬಂದಿವೆ; ಸರಕಾರದ ಹಾಗೂ ಸಂಘಸಂಸ್ಥೆಗಳ ಈ ಎಲ್ಲ ಯತ್ನಗಳಿಂದಾಗಿ ಇಂದು ಜನಜಾಗೃತಿ ಹೆಚ್ಚುತ್ತಿದೆಯೆಂಬುದು ನಿಜ. ಆದರೂ ಸಂರಕ್ಷಣೆಯ ವಿಷಯದಲ್ಲಿ ಸಾರ್ವಜನಿಕ ಅಭಿಪ್ರಾಯ ಇನ್ನಷ್ಟು ಬಲಗೊಳ್ಳುವಂತೆ ಜನರಲ್ಲಿ ಅರಿವು ಮೂಡಿಸುವ ಕೆಲಸದಲ್ಲಿ ನಾವಿನ್ನೂ ತುಂಬಾ ಹಿಂದುಳಿದಿದ್ದೇವೆ. ಪ್ರಸ್ತುತ ಗ್ರಂಥದಲ್ಲಿ ನೀಡಲಾದ ಮಾಹಿತಿಗಳು ಈ ನಿಟ್ಟಿನಲ್ಲಿ ಕೆಲಮಟ್ಟಿಗೆ ಸಹಾಯಕವಾಗುತ್ತದೆಂದು ಆಶಿಸಲಾಗಿದೆ.

ನಿಸರ್ಗ ಸಂರಕ್ಷಣೆಯ ಬಗ್ಗೆ ಜನಜಾಗೃತಿ ಮೂಡಿಸುವ ಉದ್ದೇಶದಿಂದ

ನವದೆಹಲಿಯ ರಾಷ್ಟ್ರೀಯ ನಿಸರ್ಗ ಚರಿತ್ರಾ ವಸ್ತುಸಂಗ್ರಹಾಲಯ (ರಾ.ನಿ.ಚ.ವ.)ದಲ್ಲಿ ಜನಶಿಕ್ಷಣ ಸಂಪನ್ಮೂಲವನ್ನು ರೂಪಿಸಿರುವುದೂ, ನಾನು ಅದೇ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವುದೂ ಈ ಗ್ರಂಥ ರಚನೆಗೆ ಸಹಾಯಕವಾಗಿವೆ. ವನ್ಯಕ್ಷೇತ್ರಗಳಲ್ಲಿ ಖುದ್ದಾಗಿ ಓಡಾಡಿ ಅಪಾರ ಅನುಭವ ಗಳಿಸಿದ ಸಮರ್ಥ ನಿಸರ್ಗ ತಜ್ಞ ಶ್ರೀ ವಿ.ಜಿ. ಗೋಗಟೆ ರಾ.ನಿ.ಚ.ವ.ದಲ್ಲಿ ಕೆಲಸ ನಿರ್ವಹಿಸುತ್ತಲೇ ನನ್ನ ಈ ಕಾರ್ಯಕ್ಕೆ ನೆರವಾದುದಕ್ಕೆ ನಾನವರಿಗೆ ಋಣಿಯಾಗಿದ್ದೇನೆ. ಅಹಮದಾಬಾದಿನ ಪರಿಸರ ಶಿಕ್ಷಣ ಕೇಂದ್ರದ ಶ್ರೀ ಇ.ಕೆ. ನರೇಶ್ವರ ಅವರು ಹಸ್ತಪ್ರತಿ ಓದಿ ಸೂಕ್ತ ಸಲಹೆ ನೀಡಿ ಉಪಕರಿಸಿದ್ದಾರೆ. ಗ್ರಂಥದ ಸಂಪಾದನ ಹಂತದಲ್ಲಿ ಅಗತ್ಯ ಸುಧಾರಣೆ ಮಾಡಿದ ನ್ಯಾಶನಲ್ ಬುಕ್ ಟ್ರಸ್ಟ್‌ನ ಶ್ರೀಮತಿ ಮಂಜು ಗುಪ್ತಾ ಅವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಗ್ರಂಥಕ್ಕೆ ಬೇಕಾದ ಚಿತ್ರಗಳನ್ನು ಸಿದ್ಧಪಡಿಸುವಲ್ಲಿ ಅಹಮದಾಬಾದಿನ ಪರಿಸರ ಶಿಕ್ಷಣ ಕೇಂದ್ರದ ಡಿಸೈನ್ ಮತ್ತು ಗ್ರಾಫಿಕ್ ಘಟಕದ ಶ್ರೀ ಧುನ್ ಕರ್ಕಾರಿಯಾ ಮತ್ತು ಅವರ ಸಹೋದ್ಯೋಗಿಗಳು ನೆರವಾಗಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಭಾರತದ ಅನೇಕ ಖ್ಯಾತ ನಿಸರ್ಗತಜ್ಞರೂ ಛಾಯಾಚಿತ್ರಗಾರರೂ ಸೆರೆಹಿಡಿದ ವನ್ಯಜೀವಿ ಪಾರದರ್ಶಿಕೆಗಳು ರಾ.ನಿ.ಚ.ವ.ದಲ್ಲಿದ್ದು, ಅವುಗಳಲ್ಲಿ ಕೆಲವನ್ನು ಇಲ್ಲಿ ಮುದ್ರಿಸಲಾಗಿದೆ. ಗ್ರಂಥರಚನೆಗೆ ಅಗತ್ಯವಾದ ಪ್ರೋತ್ಸಾಹ ಮತ್ತು ನೆರವು ನನ್ನ ಪತ್ನಿ ಲೀಲಾ, ಮಕ್ಕಳಾದ ಮೀನಾ ಮತ್ತು ದಿವ್ಯಾ ಅವರಿಂದ ಲಭಿಸಿದ್ದಕ್ಕೆ ಈ ಕಾರ್ಯ ಮುಕ್ತಾಯ ಹಂತ ತಲುಪಿದೆ

ಹೊಸ ದೆಹಲಿ
ಅಕ್ಟೋಬರ್, 1992

ಎಸ್.ಎಮ್. ನಾಯರ್



# ನಮ್ಮ ವನ್ಯ ಸಂಪದ

ಪ್ರಾಣಿಗಳಿಲ್ಲದ ಪ್ರಪಂಚವನ್ನು ಊಹಿಸಿಕೊಳ್ಳಿ. ನಮ್ಮ ಸುತ್ತಮುತ್ತಲ ಪರಿಸರಕ್ಕೆ ಜೀವ ತುಂಬುವ ಬೆಕ್ಕಿಲ್ಲ, ನಾಯಿ ಇಲ್ಲ, ದನಕರುಗಳಿಲ್ಲ, ಹಕ್ಕಿಪಕ್ಷಿ ಪಾತರಗಿತ್ತಿಗಳಿಲ್ಲ; ವನ್ಯಲೋಕದ ಪ್ರಜೆಗಳಾದ ಚಿಗರೆ, ಚಿರತೆ, ಹುಲಿ ಕರಡಿಗಳಿಲ್ಲ. ಇವು ಯಾವುವೂ ಇಲ್ಲದ ಜಗತ್ತಿನಲ್ಲಿ ನಾವು ಮಾತ್ರ ಬದುಕಿ ಬಾಳಲು ಸಾಧ್ಯವೆ? ಖಂಡಿತಾ ಇಲ್ಲ. ಏಕೆಂದರೆ, ಈ ಎಲ್ಲ ಜೀವಿಗಳ ಮಧ್ಯೆಯೂ ಒಂದಲ್ಲ ಒಂದು ಬಗೆಯ ಆಂತರಿಕ ಸಂಬಂಧವಿದೆ; ಪರಸ್ಪರ ನಂಟಿದೆ. ಎಲ್ಲ ಜೀವಿಗಳೂ ಭೂಮಿ, ನೀರು ಮತ್ತು ವಾಯುವಿನ ಭೌತಿಕ ಪರಿಸರವನ್ನು ಅವಲಂಬಿಸಿವೆ. ಸಸ್ಯ, ಪ್ರಾಣಿ ಮತ್ತು ಅವುಗಳ ಪರಿಸರದ ಇಂಥ ಸಮಗ್ರ ಅಧ್ಯಯನಕ್ಕೆ ಎಕಾಲಜಿ ಅಥವಾ 'ಜೀವ ಪರಿಸರ ವಿಜ್ಞಾನ' ಎನ್ನುತ್ತಾರೆ. ಆಹಾರಕ್ಕಾಗಿ ಸಸ್ಯ ಮತ್ತು ಪ್ರಾಣಿಗಳ ಮಧ್ಯೆ, ಪ್ರಾಣಿ ಮತ್ತು ಪ್ರಾಣಿಗಳ ಮಧ್ಯೆ ಹಾಗೂ ಸಸ್ಯ, ಪ್ರಾಣಿ ಮತ್ತು ಮನುಷ್ಯರ ಮಧ್ಯೆಯ ಸಂಬಂಧ ಹೇಗಿರುತ್ತದೆಂಬುದನ್ನು ಅರ್ಥ ಮಾಡಿಕೊಳ್ಳುವುದು ಜೀವಪರಿಸರ ವಿಜ್ಞಾನದಿಂದ ಸಾಧ್ಯವಾಗುತ್ತದೆ.

ಹಸಿರು ಸಸ್ಯಗಳು ತಮ್ಮ ಆಹಾರವನ್ನು ತಾವೇ ತಯಾರಿಸಿಕೊಳ್ಳುವ 'ಪ್ರಾಥಮಿಕ ಆಹಾರ ಉತ್ಪಾದಕ'ಗಳೆಂಬುದು ನಮಗೆ ಗೊತ್ತೇ ಇದೆ. ನೀರು ಮತ್ತು ಇಂಗಾಲದ ಡಯಾಕ್ಸೈಡನ್ನು ಅವು ಸೂರ್ಯನ ಶಕ್ತಿಯಲ್ಲಿ ಬೇಯಿಸಿ (ಅಂದರೆ, 'ದ್ಯುತಿ ಸಂಶ್ಲೇಷಣೆ' ಮಾಡಿ) ಅವು ಸರಳವಾದ ಶರ್ಕರ ಪಿಷ್ಟಗಳನ್ನು ಉತ್ಪಾದಿಸುತ್ತವೆ. ಶಾಖಾಹಾರಿ ಪ್ರಾಣಿಗಳು ಈ ಸಸ್ಯಗಳಲ್ಲಿ ಶೇಖರವಾದ ಆಹಾರವನ್ನೇ ತಿಂದು, ತಮ್ಮ ಚಟುವಟಿಕೆಗಳಿಗೆ ಅಗತ್ಯವಾದ ಶಕ್ತಿಯನ್ನು ಗಳಿಸುತ್ತವೆ. ಒಂದನ್ನೊಂದು ಹೀಗೆ ತಿಂದು ಬದುಕುವ ಇಂಥ ಪ್ರಕ್ರಿಯೆಗೆ 'ಆಹಾರದ ಸರಪಳಿ' ಎನ್ನುತ್ತಾರೆ. ಉದಾ:

ಹುಲ್ಲು→ ಜೀರುಂಡೆ → ಕಪ್ಪೆ. ಇದೊಂದು ಸರಳ ಸರಪಳಿ. ಈಗ ಈ ಕಪ್ಪೆಯನ್ನು ಹಾವು ನುಂಗಿ, ಆ ಹಾವನ್ನು ಹದ್ದು ಭಕ್ಷಿಸಿದರೆ ಅದು ಒಟ್ಟಾರೆ ಸೇರಿ ಕ್ಲಿಷ್ಟ ಸರಪಳಿಯಾಗುತ್ತದೆ. ನಿಸರ್ಗದಲ್ಲಿ ಇಂಥ ಅನೇಕ ವಿಧದ ಆಹಾರ ಸರಪಳಿಗಳಿರುತ್ತವೆ. ಯಾವುದೇ ವಾಸಕ್ಷೇತ್ರದಲ್ಲಿ ಇಂಥ ಅನೇಕ ಸರಪಳಿಗಳು ಒಂದಕ್ಕೊಂದು ತಳಕು ಹಾಕಿಕೊಂಡಿದ್ದಾಗ ಅದಕ್ಕೆ 'ಆಹಾರ ಜಾಲ' ಎನ್ನುತ್ತೇವೆ.

ಆಹಾರ ಜಾಲವೆಂದರೆ ಅದೊಂದು ಅನೇಕ ಜೀವ ಪ್ರಭೇದಗಳ ಮಧ್ಯೆಯ ಅತ್ಯಂತ ನಾಜೂಕಿನ, ಸ್ವಯಂಪೂರ್ಣ, ಸಮತೋಲದ ಜೀವಮಂಡಲ. (ವರ್ಣಚಿತ್ರ –1). ಈ ಜಾಲದ ಒಂದೇ ಒಂದು ಎಳೆಗೆ ಧಕ್ಕೆ ಬಂದರೂ ಕೂಡಾ ಅದರಿಂದಾಗಿ ಇನ್ನೊಂದು ಎಳೆಗೆ ಇಲ್ಲವೇ ಇಡೀ ಮಂಡಲಕ್ಕೆ ಧಕ್ಕೆ ಬರುತ್ತದೆ. ಉದಾಹರಣೆಗೆ ಹುಲಿ ಚಿರತೆಯಂಥ ಮಾಂಸಾಹಾರಿ ಪ್ರಾಣಿಗಳು ನಿರ್ವಂಶವಾದರೆ ಜಿಂಕೆಗಳ ಸಂತತಿ ಅತಿಯಾಗಿ ಬೆಳೆದು, ಹುಲ್ಲು ಮೇವಿನ ಅತಿ ಕ್ಷಿಪ್ರ ನಾಶಕ್ಕೆ ಕಾರಣವಾಗುತ್ತದೆ. ಹುಲ್ಲುಸಸ್ಯ ಚಿಗುರಲೂ ಅವಕಾಶ ಇಲ್ಲದಂತಾಗುತ್ತದೆ.

ಪ್ರಕೃತಿಯಲ್ಲಿ ಆಂತರಿಕ ಸಂಬಂಧಗಳು ಅನೇಕ ರೂಪಗಳಲ್ಲಿ ಕಾಣಸಿಗುತ್ತವೆ. ಸಸ್ಯ ಮತ್ತು ಕಾಡುಗಳು ಪ್ರಾಣಿಗಳಿಗೆ ಆಶ್ರಯ ಮತ್ತು ಆಹಾರ ನೀಡುತ್ತವೆ. ಕೀಟಗಳು ಹಾಗೂ ಪಕ್ಷಿಗಳು ಹೂಗಳಿಗೆ ಪರಾಗಸ್ಪರ್ಶ ಮಾಡುತ್ತವೆ; ಪ್ರಾಣಿಗಳು ಸಸ್ಯಗಳ ಬೀಜ ಪ್ರಸಾರಕ್ಕೆ ನೆರವಾಗುತ್ತವೆ; ಪರೋಪಜೀವಿಗಳು ಸಸ್ಯ ಮತ್ತು ಪ್ರಾಣಿಗಳೆರಡರಲ್ಲೂ ಆಶ್ರಯ ಪಡೆಯುತ್ತವೆ. ಇಂಥ ಸಂಬಂಧಗಳು ಕೆಲವು ಸಂದರ್ಭಗಳಲ್ಲಿ 'ನೀನೆನಗಿದ್ದರೆ ನಾ ನಿನಗೆ' (ಸಿಂಬಯೊಸಿಸ್) ಎಂಬಂತೆ ಒಂದಕ್ಕೊಂದು ಪೂರಕವಾಗಿರುತ್ತವೆ. ಕೆಲವೊಮ್ಮೆ ಹಾಗಿರುವುದಿಲ್ಲ. ಇವೆಲ್ಲವುಗಳ ಜತೆಗೇ ನಿಸರ್ಗದ ಕೊಳೆ ತೆಗೆಯುವ 'ಝಾಡಮಾಲಿ'ಗಳೂ ಇವೆ. ಸತ್ತಿದ್ದನ್ನು, ಕೊಳೆತಿದ್ದನ್ನು ಕತ್ತೆಕಿರುಬ, ಕಾಗೆ, ಹದ್ದು, ನೊಣಗಳು ಭಕ್ಷಿಸುತ್ತವೆ; ಏಕಾಣುಜೀವಿಗಳು ವಿಭಜಿಸುತ್ತವೆ. ಇದರಿಂದಾಗಿ ನಿಸರ್ಗದಲ್ಲಿನ ಯಾವುದೂ ವ್ಯರ್ಥವಾಗದಂತೆ, ಸತ್ತ ಪ್ರಾಣಿಗಳ ಹಾಗೂ ಸಸ್ಯಗಳ ಸಾವಯುವ ಹಾಗೂ ನಿರವಯುವ ದ್ರವ್ಯಗಳು ಪುನಃ ನಿಸರ್ಗದಲ್ಲಿ ಲೀನವಾಗಿ ಮುಂದೆ ಹುಟ್ಟಿ ಬರುವ ಜೀವಿಗಳಿಗೆ ಮೂಲಾಧಾರವಾಗುತ್ತವೆ.

ಪ್ರಾಣಿಗಳ ಮತ್ತು ಸಸ್ಯಗಳ ಮಧ್ಯೆ ತುಂಬ ಸಂಕೀರ್ಣವಾದ, ಹಾಗೂ ಅಷ್ಟೇ ಸಮತೋಲನಕಾರಿಯಾದ ಸಂಬಂಧವನ್ನು ನಿಸರ್ಗ ವ್ಯವಸ್ಥೆ ಮಾಡಿಟ್ಟಿದೆ. ಜಲಚಕ್ರ, ಇಂಗಾಲದ ಚಕ್ರ, ಸಾರಜನಕ ಚಕ್ರ, ಖನಿಜ ಚಕ್ರವೇ ಮುಂತಾದ ಜೀವರಸಾಯನ – ಭೂರಸಾಯನ ಚಕ್ರಗಳ ಮೂಲಕ ಪರಿಸರದಲ್ಲಿನ ಅತ್ಯಗತ್ಯ ಮೂಲವಸ್ತುಗಳು ಜೀವಿಗಳಿಗೆಲ್ಲ ಸದಾಕಾಲ ಸಂಚರಿಸುವಂತಿರುವುದರಿಂದ ಭೂಮಿಯ ಎಲ್ಲ ಜೀವಿಗಳೂ ಪರಸ್ಪರ ಜೋಡಣೆಗೊಂಡಿವೆ. ಹೀಗೆ ಈ ಭೂ ಗ್ರಹದಲ್ಲಿ ನಿಸರ್ಗ ಸೃಷ್ಟಿಸಿರುವ ಸಸ್ಯಗಳನ್ನೂ, ಪ್ರಾಣಿಗಳನ್ನೂ, ಅಜೈವಿಕ ಸಂಪನ್ಮೂಲಗಳನ್ನೂ ಸಂರಕ್ಷಿಸಬೇಕಾದುದು ಅದೆಷ್ಟು ಮಹತ್ವದ್ದೆಂಬುದನ್ನು ಮನಗಾಣಲು ಈ

ಜೀವಪರಿಸರ ಸಂಬಂಧಗಳ ಬಗ್ಗೆ ನಮ್ಮಲ್ಲಿ ತಿಳುವಳಿಕೆ ಇರಬೇಕಾದುದು ಅತ್ಯಗತ್ಯವಾಗಿದೆ.

## ಜೀವ ವೈವಿಧ್ಯ

ಈ ಭೂಮಿಯ ಮೇಲೆ ಜೀವಿಗಳ ಉಗಮವಾಗಿ ಸುಮಾರು 600 ಕೋಟಿ ವರ್ಷಗಳೇ ಸಂದಿರಬಹುದು. ಇಂದು ಇಲ್ಲಿ ಐದು ಲಕ್ಷಕ್ಕೂ ಹೆಚ್ಚು ಬಗೆಯ ಸಸ್ಯಗಳಿವೆ. ಸುಮಾರು ಹತ್ತು ಲಕ್ಷ ಬಗೆಯ ಪ್ರಾಣಿಗಳಿವೆ. ಇವೆಲ್ಲವೂ 'ಜೀವ ಮಂಡಲ'ವೆಂಬ ಒಂದು ತೆಳುವಾದ ಪದರಕ್ಕಷ್ಟೇ ಸೀಮಿತವಾಗಿವೆ. ಈ 'ಜೀವ ಮಂಡಲ'ದಲ್ಲಿ ವಿವಿಧ ಬಗೆಯ ಸಸ್ಯ ಅಥವಾ ಪ್ರಾಣಿಗಳು ಬದುಕಲಿಕ್ಕೆ ಸೂಕ್ತವಾದ ಹವಾಮಾನ ಮತ್ತು ಭೂಗುಣಗಳಿರುವ ಅನೇಕ ವಾಸಕ್ಷೇತ್ರಗಳಿದ್ದು ಅವುಗಳನ್ನು ವಿಭಿನ್ನ 'ಜೀವಾಶ್ರಯ'ಗಳೆಂದು ವಿಂಗಡಿಸಬಹುದಾಗಿದೆ. ಉದಾಹರಣೆಗೆ "ಉಷ್ಣವಲಯದ ಮಳೆಕಾಡುಗಳು" ಎಂಬುದೊಂದು ನಿರ್ದಿಷ್ಟ ಜೀವಾಶ್ರಯ. ಮಳೆ ಕಾಡು ಎಂದರೆ ತುಂಬ ಮಳೆ ಬೀಳುವ, ಬೆಚ್ಚಗಿನ ಆದರೆ ಅತಿ ತೇವಭರಿತ ಪರಿಸರ. ಇಲ್ಲಿನ ಅರಣ್ಯ ವಾಸಕ್ಷೇತ್ರದ ವಿಶಿಷ್ಟ ಪರಿಸರಕ್ಕೆ ಹೊಂದಿಕೊಂಡೇ ವಿಕಾಸವಾದ ವಿವಿಧ ಬಗೆಯ ಜೀವಿಗಳಿಗೆಲ್ಲ ಇದು ಆಶ್ರಯತಾಣವಾಗಿದೆ. ಇಲ್ಲಿನ ಮರಗಳ ಎತ್ತರದ ಛಾವಣಿಯಲ್ಲಿ ಕೋತಿಗಳು, ಹಾರುವಳಿಲು ಮತ್ತು ಪಕ್ಷಿಗಳು ವಾಸಿಸುತ್ತವೆ. ದಟ್ಟ ನೆರಳಿನ ನೆಲದ ಮೇಲೆ ಹುಲಿ, ಜಿಂಕೆ, ಹಾವುಗಳೂ, ಸಹಸ್ರಪದಿಯಂಥ ಕ್ರಿಮಿಕೀಟಗಳೂ ವಾಸ ಮಾಡುತ್ತವೆ. ಹೀಗೆ ನಿರ್ದಿಷ್ಟ ಬಗೆಯ ಜೀವಿಗಳು ಪರಸ್ಪರ ಅವಲಂಬಿತವಾಗಿ ಬದುಕುವ ವೈಶಿಷ್ಟ್ಯಪೂರ್ಣ ವಾಸಕ್ಷೇತ್ರವೇ 'ಜೀವಾಶ್ರಯ'. ಮಳೆ ಕಾಡಿನ ಹಾಗೆ ಸಾಗರ, ಸರೋವರ, ಹುಲ್ಲುಗಾವಲು, ಮರುಭೂಮಿ – ಹೀಗೆ ವಿವಿಧ ಬಗೆಯ ಜೀವಾಶ್ರಯಗಳಿದ್ದು, ಇಲ್ಲಿನ ವಾಸಕ್ಷೇತ್ರಕ್ಕೆ ಹೊಂದಿಕೊಂಡು ವಿಕಾಸವಾದ ನಿರ್ದಿಷ್ಟ ಬಗೆಯ ಸಸ್ಯ, ಜೀವಜಂತು ಸಂಕುಲಗಳು ಇಲ್ಲೆಲ್ಲ ತಮ್ಮದೇ ಆದ ಸ್ವಯಂಪೂರ್ಣ ಪರಿಸರ ನಿರ್ಮಿಸಿಕೊಂಡಿವೆ.

ನಿಸರ್ಗ ಹೆಣೆದಿಟ್ಟ ಕ್ಲಿಷ್ಟ, ಸಂಕೀರ್ಣ ಜೀವಜಾಲ ಇದು. ಆಯಾ ಭೂಪರಿಸರ ಹಾಗೂ ಹವಾಮಾನದೊಂದಿಗೆ ಜೀವಿಗಳು ಬದುಕಿರುವಂತೆ ನಿಸರ್ಗ ಇಲ್ಲಿ ನಾಜೂಕಿನ ಸಮತೋಲನವನ್ನು ಸಾಧಿಸಿದೆ. ಇದು ನಮ್ಮ ನೈಸರ್ಗಿಕ ಬಳುವಳಿ. ಪ್ರಾಕೃತಿಕ ಪರಂಪರೆ. ಮನುಷ್ಯನೂ ಇತರ ಅಸಂಖ್ಯ ಪ್ರಾಣಿಗಳಂತೆ ತನ್ನ ಅಸ್ತಿತ್ವಕ್ಕಾಗಿ ಹಾಗೂ ಬದುಕಿಗಾಗಿ ಈ ಪರಂಪರೆಯನ್ನೇ ಅವಲಂಬಿಸಿದ್ದಾನೆ.

## ಭಾರತದ ಪ್ರಾಣಿಸ್ತೋಮ

ತುಂಬ ಸಮೃದ್ಧ ಹಾಗೂ ವೈವಿಧ್ಯಪೂರ್ಣ ಪ್ರಾಣಿಸ್ತೋಮ ಭಾರತದಲ್ಲಿದೆ. ಇಲ್ಲಿ ಸುಮಾರು 340 ಬಗೆಯ ಸ್ತನಿವಂಶಗಳು, 1,200 ಬಗೆಯ ಪಕ್ಷಿಗಳು, 420 ಬಗೆಯ ಸರೀಸೃಪಗಳು, 140 ಬಗೆಯ ಉಭಯಜೀವಿಗಳು, 2,000 ಬಗೆಯ ಮೀನುಗಳು, 50,000 ಕೀಟಗಳು, 4,000 ಮೃದ್ವಂಗಿಗಳು ಹಾಗೂ ಇತರ ಅಕಶೇರುಕ (ಬೆನ್ನು

ಮೂಳೆಯಿಲ್ಲದ) ಪ್ರಾಣಿಗಳು, ಹೀಗೆ ಒಟ್ಟು 75,000 ವಂಶಗಳಿಗೆ ಸೇರಿದ ಪ್ರಾಣಿಸ್ತೋಮ ನಮ್ಮದಾಗಿದೆ.

ಸ್ತನಿಗಳಲ್ಲಿ ಭಾರತದ ಅತ್ಯಂತ ಪ್ರಾಚೀನತಮ ಪುರಾಣಕತೆಗಳಲ್ಲೂ ರಾಜ ಮೆರವಣಿಗೆಗಳಲ್ಲೂ ರಾರಾಜಿಸುತ್ತ ಬಂದ ಆನೆ ಸೇರಿದೆ; ನೀಲ್‌ಗಾಯ್ (ನೀಲಿಪಶು), ಕಾಟಿ (ಕಾಡೆಮ್ಮೆ ಕಾಡುಕೋಣ) ಸೇರಿವೆ. ಭಾರತಕ್ಕೆ ವಿಶಿಷ್ಟವಾದ ನಾಲ್ಕು ಕೊಂಬುಗಳ ಜಿಂಕೆ (ಚೌಸಿಂಘಾ) ಮತ್ತು ಕೃಷ್ಣಮೃಗ ಸೇರಿವೆ. ಒಂಟಿ ಕೊಂಬಿನ ಘೇಂಡಾಮೃಗ ಮತ್ತು ಭಾರತೀಯ ಕಾಡುಕತ್ತೆಗಳು (ಘೋರ್‌ಖುರ್) ಸೇರಿವೆ. ಜಿಂಕೆಗಳಲ್ಲಂತೂ ಅನೇಕ ವಿಶಿಷ್ಟ ಪ್ರಭೇದಗಳಿವೆ: ಅಪರೂಪದ ಕಾಶ್ಮೀರಿ ಕಡವೆ, ಜವುಳು ಜಿಂಕೆ (ಬಾರಾಸಿಂಘಾ), ಚುಕ್ಕೆ ಜಿಂಕೆ (ಸಾರಗ), ಕಸ್ತೂರಿ ಮೃಗ, ಹಣೆಕೊಂಬಿನ ಜಿಂಕೆ (ಥಾಮಿನ್), ಮೂಷಕ ಜಿಂಕೆಗಳೂ ಇಲ್ಲಿವೆ.

ಬೇಟೆಯಾಡುವ ಮೃಗಗಳಲ್ಲಿ ಆಫ್ರಿಕ ಬಿಟ್ಟರೆ ಜಗತ್ತಿನ ಬೇರೆಡೆಯೆಲ್ಲೂ ಕಾಣಸಿಗದ ಸಿಂಹಗಳು ನಮ್ಮಲ್ಲಿವೆ. ಇವಕ್ಕೆ 'ಏಷ್ಯಾಟಿಕ್ ಸಿಂಹ' ಎನ್ನುತ್ತಾರೆ. ಹುಲಿಯಂತೂ ನಮ್ಮ ದೇಶದ ರಾಷ್ಟ್ರೀಯ ಮೃಗ. ಕಣ್ಣು ಕೋರೈಸುವ ಬಣ್ಣ, ಮಿರುಗುವ ಪಟ್ಟೆಗಳು ಹಾಗೂ ಅಸಾಮಾನ್ಯ ಸ್ನಾಯುಬಲದ ನಮ್ಮ ಹುಲಿಗಳೆಂದರೆ ರಾಷ್ಟ್ರದ ಹೆಮ್ಮೆಯ ಪ್ರತೀಕ. ಮಾಂಸಾಹಾರಿ ಪ್ರಾಣಿಗಳಲ್ಲೆಲ್ಲಾ ಅತ್ಯಂತ ರೋಚಕವೂ ಭಯಾನಕವೂ ಆದ ವ್ಯಾಘ್ರ ತನ್ನ ಬಲಿಷ್ಠತೆಯನ್ನು ಸಾರಲು ನೆಲ ನಡುಗುವಂತೆ ಗರ್ಜಿಸುತ್ತದೆ. ಜಗತ್ತಿನಲ್ಲಿರುವ ಎಂಟು ವ್ಯಾಘ್ರ ಪ್ರಭೇದಗಳಲ್ಲಿ ಭಾರತದ ಹುಲಿಗೆ ಬೆಂಗಾಲ್ ಟೈಗರ್ ಎನ್ನುತ್ತಾರೆ. ಭಾರತದ ಎಲ್ಲೆಡೆ ಅಷ್ಟೇ ಅಲ್ಲ, ನೆರೆಯ ಭೂತಾನ್, ನೇಪಾಳ ಮತ್ತು ಬಾಂಗ್ಲಾದೇಶದಲ್ಲೂ ಈ ರಾಯಲ್ ಬೆಂಗಾಲ್ ಟೈಗರ್ ನೋಡ ಸಿಗುತ್ತದೆ. ಹುಲಿಗಳ ವಂಶಕ್ಕೆ ಸೇರಿದ ಚಿರತೆ, ಕಪ್ಪು ಚಿರತೆ, ಹಿಮ ಚಿರತೆ ಹಾಗೂ ಇವುಗಳ ಇತರ ಅನೇಕ ಕಿರುಪ್ರಭೇದಗಳೂ ನಮ್ಮಲ್ಲಿವೆ.

ವಿವಿಧ ಬಗೆಯ ಮಂಗ ಮತ್ತು ಲಂಗೂರಗಳನ್ನೂ ಭಾರತದಲ್ಲಿ ಸರ್ವೇಸಾಮಾನ್ಯವಾಗಿ ಕಾಣಬಹುದಾಗಿದೆ. ಬಾಲವಿಲ್ಲದ ವಾನರಗಳ ಪೈಕಿ 'ಹೂಲಾಕ್ ಗಿಬ್ಬನ್' ಎಂಬ ಒಂದೇ ಒಂದು ಬಗೆಯ ವಾನರ ವಂಶ ನಮ್ಮ ಪೂರ್ವ ಭಾರತದ ಮಳೆಕಾಡುಗಳಲ್ಲಿ ವಾಸಿಸುತ್ತವೆ. ಮುಖದ ಸುತ್ತ ರೋಮದ ಪ್ರಭಾವಳಿ ಇರುವ ಸಿಂಹಬಾಲದ ಲಂಗೂರಗಳು (ಸಿಂಗಳೀಕ) ದಕ್ಷಿಣ ಭಾರತದಲ್ಲಿವೆ.

ಪಕ್ಷಿಲೋಕವಂತೂ ಭಾರತದಲ್ಲಿ ಅತ್ಯಂತ ಸಮೃದ್ಧ ಹಾಗೂ ವರ್ಣಮಯ. ನಮ್ಮ ರಾಷ್ಟ್ರೀಯ ಪಕ್ಷಿ ನವಿಲು, ಅದರಲ್ಲೂ ಗಂಡು ನವಿಲು ತನ್ನ ಹೊಳಪು ನೀಲಿಯ ನೀಳಕತ್ತು, ತಲೆಯ ಮೇಲಿನ ಪುಚ್ಛ ಹಾಗೂ ಉದ್ದನ್ನ ನಯನ ಮನೋಹರ ಗರಿಗಳಿಂದಾಗಿ ಅತ್ಯಂತ ಸುಂದರ ಪಕ್ಷಿಗಳಲ್ಲೊಂದೆನಿಸಿದೆ. ಹೆಣ್ಣಿನೆದುರು ಅದು ತನ್ನ ಗರಿಗಳನ್ನು ಚಾಮರದಂತೆ ಕೆದರಿ ಪ್ರಣಯ ನರ್ತನ ಮಾಡುವಾಗಿನ ಬೆಡಗು ವರ್ಣನಾತೀತ. ಪುರಾತನ ಕಾಲದಿಂದಲೂ ಈ ಪಕ್ಷಿ ಭಾರತದ ಸಾಹಿತ್ಯ, ಜಾನಪದ ಹಾಗೂ ದಂತಕತೆಗಳಲ್ಲಿ ಮಹತ್ವದ ಸ್ಥಾನ ಪಡೆದಿದೆ. ನಮ್ಮ ಮೈದಾನ ಪ್ರದೇಶದ ಎಲ್ಲೆಡೆಯಲ್ಲೂ ನವಿಲಿನ ವಾಸಸ್ಥಾನವಿದೆಯಾದರೂ, ಉತ್ತರ ಭಾರತದ ಶುಷ್ಕ

ಮೈದಾನಗಳಲ್ಲಿ ಇವು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇದಲ್ಲದೆ ವಿವಿಧ ಬಗೆಯ ಬಾತುಕೋಳಿಗಳು, ಬೇಟೆಗಾರ ಫೆಸೆಂಟ್, ಪ್ಯಾರಕೀಟ್ (ಸಣ್ಣ ಗಿಳಿ) ಪಾರಿವಾಳ, ಕೊಕ್ಕರೆ, ಉದ್ದಚುಂಚಿನ ಹಾರ್ನ್‌ಬಿಲ್ ಮುಂತಾದ ಪಕ್ಷಿಗಳು ನಮ್ಮ ಅರಣ್ಯಗಳಲ್ಲಿ ಹಾಗೂ ನೀರಿನ ತಡಿಗಳಲ್ಲಿ ಹೇರಳ ಕಂಡುಬರುತ್ತವೆ.

ವಿಶಾಲ ಹಿಮಾಲಯ ಪರ್ವತ ಶ್ರೇಣಿಯ ತಪ್ಪಲಿನಲ್ಲಿ ಕಾಡು ಮೇಕೆಗಳು, ಐಬೆಕ್ಸ್, ಚಮರೀಮೃಗ, ಮಾರ್ಖೊರ್‌ಗಳಲ್ಲದೆ, ಎತ್ತರದ ಶ್ರೇಣಿಗಳಲ್ಲಿ ಕಿರುಪಾಂಡಾ ಹಾಗೂ ಹಿಮಚಿರತೆಗಳೂ ವಾಸಿಸುತ್ತವೆ.

ಸ್ತನಿ ಮತ್ತು ಪಕ್ಷಿವರ್ಗಗಳ ಇಂಥ ಬಗೆಬಗೆಯ ಪ್ರಭೇದಗಳಲ್ಲದೆ ನಮ್ಮಲ್ಲಿ ದ್ವಿಚರಿಗಳ, ಸರೀಸೃಪಗಳ ಹಾಗೂ ಜಲಚರಗಳ ಇನ್ನಷ್ಟು ವೈವಿಧ್ಯಪೂರ್ಣ ಭಂಡಾರವೇ ಇದೆ. ಸರೀಸೃಪಗಳಲ್ಲಿ ಇಂದು ಬದುಕಿರುವ ಆಮೆಗಳಲ್ಲಿ ಅತಿ ದೊಡ್ಡ ವಂಶವೆಂಬ ಹೆಗ್ಗಳಿಕೆಯುಳ್ಳ ತೊಗಲುಬೆನ್ನಿನ ಆಮೆ ನಮ್ಮಲ್ಲಿ ಹೇರಳ ಇವೆ. ಚಿತ್ರ ಕವಚದ ಆಮೆ, ಹಸಿರು ಕಡಲಾಮೆಗಳಲ್ಲದೆ, ಸಿಹಿನೀರಿನ ಆಮೆಗಳ ಅನೇಕ ವಂಶಗಳೂ ನಮ್ಮ ನದಿಕೆರೆಗಳಲ್ಲಿವೆ. ಗಂಗಾನದಿಯ ಗಡಿಯಾಲ್, ಅಳಿವೆಗಳ ಮಗ್ಗರ್ ಜಾತಿಯ ಮೊಸಳೆಗಳು; ಬಗೆಬಗೆಯ ಉಡಗಳು; ದೈತ್ಯಗಾತ್ರದ ವಾರಾನಸ್ ಹಲ್ಲಿಗಳು; ಇನ್ನು ಹಾವುಗಳಲ್ಲಂತೂ ಇಲಿ ಹಿಡಿಯುವ ವಿಷರಹಿತ ಕೇರೆ ಹಾವುಗಳಿಂದ ಹಿಡಿದು ವಿಷಭರಿತ ನಾಗರಗಳವರೆಗೆ ಎಷ್ಟೆಲ್ಲ ಪ್ರಭೇದಗಳಿವೆ. ದ್ವಿಚರಿಗಳಲ್ಲಿ ಸುಮಾರು ನೂರಕ್ಕೂ ಹೆಚ್ಚು ಕಪ್ಪೆ, ಮರಗಪ್ಪೆಗಳೂ, ಓತಿಕ್ಯಾತದಂಥ ಸಲಾಮ್ಯಾಂಡರ್‌ಗಳೂ ಇವೆ. ಇದಲ್ಲದೆ, ಸಾಗರ, ನದಿ, ಕೆರೆ, ಜಲಾಶಯಗಳಲ್ಲಿ ನೂರೊಂದು ವಂಶಗಳ ಮೀನುಗಳು ಆಶ್ರಯ ಪಡೆದಿವೆ.

ಇಷ್ಟೇ ಅಲ್ಲ, ಏಕಾಣು ಪ್ರಾಣಿವರ್ಗ, ಕಂಟಕ ಚರ್ಮಿಗಳು, ಬಣ್ಣಬಣ್ಣದ ಕೀಟಗಳು, ಮೃದ್ವಂಗಿಗಳು, ಹೀಗೆ ಅಕಶೇರುಕಗಳ ಗುಂಪಿಗೆ ಸೇರಿದ ಅಸಂಖ್ಯಾತ ಜೀವಿಗಳು ಭಾರತದ ಎಲ್ಲ ಬಗೆಯ ವಾಸಕ್ಷೇತ್ರಗಳಲ್ಲಿ ಧುಮುಧುಮಿಸುತ್ತಿವೆ.

ನಮ್ಮದು ವಿಶಾಲ ಭಾರತ. 329 ದಶಲಕ್ಷ ಹೆಕ್ಟೇರ್‌ಗಳಷ್ಟು ವಿಸ್ತಾರ ಭೂಮಿ. 7,516 ಕಿಲೋಮೀಟರ್ ಉದ್ದದ ಕಡಲತೀರ. ಮೂರು ದಿಕ್ಕುಗಳಲ್ಲಿ ಸಾಗರ; ನೂರಾರು ನದಿಗಳು; ಅಸಂಖ್ಯಾತ ಜಲಾಶಯಗಳು. ರಾಜಸ್ತಾನದ ಮರುಭೂಮಿ, ವಿಶಾಲ ತಪ್ಪಲು, ದೂರದ ಅಂಡಮಾನ್, ನಿಕೊಬಾರ್, ಲಕ್ಷದ್ವೀಪಗಳು. ಆಮೇಲೆ, ಮೇಲೆ ಹಿಮಾಲಯ ಪರ್ವತಶ್ರೇಣಿ. ವೈವಿಧ್ಯಮಯ ಭೂಗೋಲ ನಮ್ಮದು. ಅಷ್ಟೇ ಬೆರಗುಗೊಳಿಸುವ, ಬೆಡಗಿನ ಪ್ರಾಣಿಸ್ತೋಮ, ಸಸ್ಯಸ್ತೋಮಗಳ ಜೀವಗೋಲ ನಮ್ಮದು.



# ಬರಿದಾಗುತ್ತಿರುವ ವನ್ಯಲೋಕ

ವನ್ಯಪ್ರಾಣಿ ಹಾಗೂ ವನ್ಯ ಸಸ್ಯಗಳ ಆರೋಗ್ಯ ಮತ್ತು ಸುಸ್ಥಿತಿ ಅನೇಕ ಸಂಗತಿಗಳನ್ನು ಆಧರಿಸಿರುತ್ತದೆ. ಸೂಕ್ತ ಹವಾಮಾನ, ಆಹಾರ, ನೀರು ಮತ್ತು ಆಶ್ರಯ ಇವೇ ಮುಂತಾದವು ಎಲ್ಲ ಜೀವಿಗಳ ಮೂಲಭೂತ ಅಗತ್ಯಗಳಾಗಿರುತ್ತವೆ. ಈ ಸಂಪನ್ಮೂಲಗಳನ್ನು ಹಂಚಿಕೊಂಡು, ಪ್ರತಿಕೂಲ ಸಂದರ್ಭಗಳಲ್ಲೂ ಪರಸ್ಪರ ಹೊಂದಾಣಿಕೆ ಮಾಡಿಕೊಂಡು, ಅಲ್ಲಿನ ವಾಸಕ್ಷೇತ್ರಕ್ಕೆ ತಕ್ಕ ಪ್ರಮಾಣದಲ್ಲಿ ತಂತಮ್ಮ ಸಂಖ್ಯಾವೃದ್ಧಿ ಮಾಡಿಕೊಳ್ಳುತ್ತ ಸಸ್ಯ ಪ್ರಾಣಿಗಳು ಸದೃಢಜೀವನ ನಡೆಸುತ್ತವೆಂಬುದಕ್ಕೆ ಪ್ರತಿಯೊಂದು ಜೀವಮಂಡಲವೂ ಉದಾಹರಣೆಯಾಗಿದೆ. ಭೂಮಿಯ ಪರಿಸರದಲ್ಲಿ ಭಾರೀ ಬದಲಾವಣೆಗಳಾಗುತ್ತ ಬಂದಿದ್ದು, ಇಲ್ಲಿನ ಜೀವಿಗಳೆಲ್ಲ ಇಂಥ ಬದಲಾಗುತ್ತಿರುವ ಪರಿಸರಕ್ಕೆ ಮಾರ್ಪಾಡಾಗುತ್ತ ವಿಕಾಸವಾಗುತ್ತ ಇಂದು ನಾವು ಕಾಣುವ ಸ್ಥಿತಿಗೆ ಬಂದಿವೆ.

ನೈಸರ್ಗಿಕ ಜೀವ ಮಂಡಲಗಳ ವಿಕಾಸಕ್ಕೆ ಕೋಟ್ಯಾಂತರ ವರ್ಷಗಳೇ ತಗುಲಿವೆ. ಈ ಎಲ್ಲ ಜೀವಮಂಡಲಗಳ ಒಂದು ವೈಶಿಷ್ಟ್ಯವೇನೆಂದರೆ, ಅಲ್ಲಿನ ನೈಸರ್ಗಿಕ ಸಮತೋಲನ ಹದಗೆಡದ ರೀತಿಯಲ್ಲಿ ಪ್ರತಿ ಜೀವಿಯೂ ತನ್ನ ಸಂಕುಲದ ಸಂಖ್ಯಾಸ್ಥಿರತೆಯನ್ನು ಕಾಪಾಡಿಕೊಂಡು ಬರುತ್ತಿದೆ. ಹೀಗಾಗುವ ಬದಲು, ಯಾವುದಾದರೂ ಒಂದು ಜೀವಿ ಮಾತ್ರ ವಂಶವೃದ್ಧಿ ಮಾಡಿಕೊಳ್ಳುತ್ತ ಹೋದರೆ ಕಾಲಕ್ರಮೇಣ ಅದರದ್ದೇ ಅತಿ ಸಂತಾನವಾಗಿ, ಅವುಗಳ ಆಹಾರಮೂಲ ಬರಿದಾಗುತ್ತ ಹೋಗುತ್ತದೆ. ಅನೇಕ ಪ್ರಾಣಿಗಳು ಭಾರೀ ಶೀಘ್ರಗತಿಯಲ್ಲಿ ಸಂತಾನವರ್ಧನೆ ಮಾಡಿಕೊಳ್ಳುತ್ತವೆ. ಕೀಟಗಳು ಏಕಕಾಲಕ್ಕೆ ಸಹಸ್ರಾರು ಮೊಟ್ಟೆಗಳನ್ನಿಡುತ್ತವೆ; ದಂಶಕ ವರ್ಗದ ಪ್ರಾಣಿಗಳ ಒಂದು ಜೋಡಿ ಪ್ರತಿವರ್ಷ 100 ರಿಂದ 120 ಮರಿಗಳನ್ನು

ಹಾಕುತ್ತದೆ. ಕೆಲವು ಮೀನುಗಳು ವಂಶವೃದ್ಧಿಯ ಒಂದೊಂದು ಋತುವಿನಲ್ಲಿ ಕೋಟ್ಯಂತರ ಮೊಟ್ಟೆ ಇಡುತ್ತವೆ. ಯಾವುದೇ ನಿರ್ಬಂಧವಿಲ್ಲದೆ ಒಂದೇ ಒಂದು ಜೋಡಿ ನೊಣಗಳು ನಿರಂತರ ವಂಶಾಭಿವೃದ್ಧಿ ಮಾಡುತ್ತ ಹೋದರೆ, ಕೇವಲ ಮೂರೇ ವರ್ಷಗಳಲ್ಲಿ ಭೂಮಿಯ ತೂಕವನ್ನೂ ಮೀರಿಸುವಷ್ಟು ನೊಣಗಳಿಗೆ ಜನ್ಮ ನೀಡಲು ಸಾಧ್ಯವಿದೆ! ಅಪರೂಪಕ್ಕೆ ಮರಿ ಹಾಕುವ ಆನೆಗಳೂ ಇದಕ್ಕೆ ಹೊರತಾಗಿಲ್ಲ. ಒಂದು ಜೋಡಿ ಆನೆಗಳು ಕೇವಲ 750ವರ್ಷಗಳಲ್ಲಿ ಸುಮಾರು 190ಲಕ್ಷ ಆನೆಗಳ ಸಂತಾನ ಸೃಷ್ಟಿಸಬಲ್ಲವೆಂದು ಸಂಖ್ಯಾತಜ್ಞರು ಹೇಳುತ್ತಾರೆ.

ನಂಬಲಸಾಧ್ಯ ಸಂಗತಿಯಲ್ಲವೆ ಇದು? ಆದರೆ ನಿಸರ್ಗದಲ್ಲಿ ಇಂಥ ಪರಿಸ್ಥಿತಿ ಬರುತ್ತಿಲ್ಲ ಹೇಗೆ? ಪ್ರಾಣಿಗಳ ಸಂಖ್ಯೆಯನ್ನು ಯಾರು ಹತೋಟಿಯಲ್ಲಿಡುತ್ತಾರೆ? ಎದ್ದು ಕಾಣುವ ಒಂದು ಅಂಶವೆಂದರೆ, ಅವೆಲ್ಲ ಆಹಾರಕ್ಕಾಗಿ ಪೈಪೋಟಿ ಮಾಡುತ್ತವೆ. ಒಂದೇ ವಂಶಕ್ಕೆ ಸೇರಿದ ಎಲ್ಲಾ ಜೀವಿಗಳೂ ಒಂದೇ ಬಗೆಯ ಆಹಾರಕ್ಕಾಗಿ ಮುಗಿಬೀಳುತ್ತವೆ. ಎಲ್ಲಕ್ಕೂ ಸಮಪ್ರಮಾಣದಲ್ಲಿ ಆಹಾರ ಸಿಗದೆ, ದುರ್ಬಲವಾದವೆಲ್ಲ ಸಾಯುತ್ತವೆ. ಪ್ರಾಣಿಗಳ ದಟ್ಟಣೆ ಹೆಚ್ಚಾಗುವುದು ಇನ್ನೊಂದು ಕಾರಣ: ಸೋಂಕುರೋಗ ಹಾಗೂ ಪೌಷ್ಟಿಕ ಆಹಾರದ ಅಭಾವದಿಂದಾಗಿ ಇನ್ನು ಕೆಲವು ಸಾಯುತ್ತವೆ. ಬೇಟೆ ಪ್ರಾಣಿಗಳ ಬಾಯಿಗೆ ತುತ್ತಾಗಿ ಇನ್ನಷ್ಟು ಗತಿಸುತ್ತವೆ. ಈ ಹಿಂದೆ ಹೇಳಿದ 'ಆಹಾರ ಸರಪಳಿ'ಯ ವ್ಯವಸ್ಥೆಯ ಪ್ರಕಾರ, ಮಾಂಸಾಹಾರಿ ಪ್ರಾಣಿಗಳು ಸಸ್ಯಾಹಾರಿ ಪ್ರಾಣಿಗಳನ್ನು ತಿನ್ನುವುದು ಪ್ರತಿಯೊಂದು ಜೀವಮಂಡಲದ ನೈಸರ್ಗಿಕ ಲಕ್ಷಣ. ಪ್ರಾಣಿಸಂಖ್ಯೆಯನ್ನು ಹದ್ದುಬಸ್ತಿನಲ್ಲಿಡಲು ಕಾರಣವಾಗುವ ಇನ್ನು ಕೆಲವು ಅಂಶಗಳೆಂದರೆ: ವಿಪರೀತ ಹವಾಮಾನ, ನೈಸರ್ಗಿಕ ವಿಕೋಪಗಳು, ವಾಸಕ್ಷೇತ್ರದ ನಿರ್ನಾಮ, ಇತ್ಯಾದಿ. ಅಂತೂ, ಪರಿಸರದ 'ಹೊರುವ ಸಾಮರ್ಥ್ಯ' ಎಷ್ಟಿದೆಯೆಂಬುದನ್ನು ನಿರ್ಧರಿಸಬಲ್ಲ ಈ ಎಲ್ಲ ಅಂಶಗಳಿಂದಾಗಿ ಪ್ರಾಣಿಗಳ ಸಂಖ್ಯೆ ನಿಯಂತ್ರಣದಲ್ಲಿರುತ್ತದೆ. ಅಲ್ಲಿನ ಸಂಪನ್ಮೂಲಗಳು ಎಷ್ಟು ಪ್ರಾಣಿಗಳ ಬದುಕಿಗೆ ಸಾಕಾಗುವಷ್ಟಿವೆಯೆಂಬ ಆಧಾರದ ಮೇಲೆ, ಎಲ್ಲ ಪ್ರಾಕೃತಿಕ ಜೀವ ಮಂಡಲಗಳೂ ನಿಗದಿತ ಸಂಖ್ಯೆಯ ಪ್ರಾಣಿಗಳಿಗೆ ಜೀವನಾಧಾರ ನೀಡುತ್ತವೆ. ಹೀಗೆ, ಜೀವ ಮಂಡಲದ ಈ 'ಹೊರುವ ಸಾಮರ್ಥ್ಯ'ವೆಂಬ ವಿಲಕ್ಷಣ ಸಂಗತಿಯೇ ಜೀವಿಸಂಖ್ಯೆಯ ಸೂಕ್ಷ್ಮ ಸಮತೋಲದ ರಕ್ಷಣೆಗೆ, ಪರಸ್ಪರ ಅವಲಂಬನೆಗೆ ಹಾಗೂ ಅಂತಸ್ಸಂಬಂಧಕ್ಕೆ ಕಾರಣವಾಗುತ್ತದೆ.

ಪ್ರತಿಯೊಂದು ಜೀವಮಂಡಲವೂ ಅಲ್ಲಿನ ಪರಿಸರಕ್ಕೆ ಹೊಂದಿಕೊಂಡ ವೈವಿಧ್ಯಮಯ ಜೀವಿಗಳಿಗೆ ಆಧಾರ ನೀಡಿದೆ. ಇಲ್ಲಿನ ಒಂದೊಂದು ಜೀವಿಯೂ ಇತರ ಜೀವಿಗಳ ಹಾಗೂ ಭೌತಿಕ ಪರಿಸರಗಳ ಮಧ್ಯೆ ಕೊಂಡಿಯಾಗಿರುತ್ತದೆ; ಪುನರಾವರ್ತಿತ ಘಟನೆಗಳಲ್ಲಿ ಭಾಗಿಯಾಗಿರುತ್ತದೆ. ಸಸ್ಯಗಳು ಸಂಗ್ರಹಿಸಿದ ಶಕ್ತಿಯೆಲ್ಲ ಪ್ರಾಣಿಗಳಿಗೆ ವರ್ಗಾವಣೆಯಾಗುತ್ತದೆ. ಭೂಮಿಯಿಂದ ಸಂಗ್ರಹಿತವಾದ ಪೋಷಕಾಂಶಗಳು ಮತ್ತೆ ಸಾಯುವಿಕೆ ಹಾಗೂ ಕೊಳೆಯುವಿಕೆಯಿಂದಾಗಿ ಭೂಮಿಗೇ ಹಿಂದಿರುಗುತ್ತವೆ. ಸಾವು ಸಂಭವಿಸಿದಾಗೆಲ್ಲ ಹೊಸ ಜೀವದ ಅಂಕುರವಾಗುತ್ತದೆ.

ವರ್ಷ ಮುಗಿದು ವರ್ಷಕ್ಕೆ, ಶತಮಾನ ಮುಗಿದು ಶತಮಾನಕ್ಕೆ, ಸಹಸ್ರ ಮುಗಿದು ಮುಂದೆ ಲಕ್ಷಾಂತರ ವರ್ಷಗಳ ಕಾಲಕ್ಕೂ ನಿರಂತರವಾಗಿ ಘಟಿಸುತ್ತಿರುವ, ಬಿಡಿಸಲಾರದ ಕ್ಲಿಷ್ಟತೆಯ ಈ ನಾಟಕಕ್ಕೇ ನಾವು ಸರಳ ಭಾಷೆಯಲ್ಲಿ 'ನಿಸರ್ಗ ಸಮತೋಲ' ಎನ್ನುತ್ತೇವೆ.

## ಜೀವ ಸಂಕುಲಗಳ ನೈಸರ್ಗಿಕ ಅಳಿವು

ಜೀವ ಮಂಡಲಗಳು ಅದೆಷ್ಟೇ ಕ್ಲಿಷ್ಟವಾಗಿ ಕಂಡರೂ, ಅದೆಷ್ಟೇ ಸ್ಥಿರವಾಗಿವೆಯೆಂದರೂ, ಭೂಚರಿತ್ರೆಯ ಅತಿ ಪುರಾತನ ಪುಟಗಳಲ್ಲಿ ರಾರಾಜಿಸಿದ ಅದೆಷ್ಟೋ ಪ್ರಾಣಿಗಳು ಹೇಳಹೆಸರಿಲ್ಲದಂತೆ ಅಳಿದುಹೋಗಿವೆ. ಜೀವಿಗಳ ವಿಕಾಸ ಪಥದಲ್ಲಿ ಪ್ರಾಣಿಸಂಕುಲಗಳೇ ಅಳಿದು ಹೋಗುವುದೂ ಅತ್ಯಂತ ಸಹಜ ವಿದ್ಯಮಾನ. ಬದುಕುಳಿಯಲು ಹೆಚ್ಚು ಹೆಚ್ಚು ಸಾಮರ್ಥ್ಯಗಳನ್ನು ಮೈಗೂಡಿಸಿಕೊಂಡು ವಿಕಾಸವಾದ ಪ್ರಾಣಿಗಳೊಂದಿಗೆ ಸೆಣಸಲಾಗದೇ ಕೆಲವಷ್ಟು ಜೀವಿಗಳು ನಿಧಾನಗತಿಯಲ್ಲಿ ನಿರ್ನಾಮವಾಗುತ್ತವೆ. ಎಷ್ಟೋ ಬಾರಿ, ಹಿಂದೆ ಸುಮಾರು 70 ದಶಲಕ್ಷ ವರ್ಷಗಳ ಪೂರ್ವದ 'ಕ್ರಿಟೇಶಿಯಸ್' ಕಾಲಾವಧಿಯಲ್ಲಿ ಡೈನೊಸಾರ್‌ಗಳೆಂಬ ದೈತ್ಯ ಉರಗಗಳು ಸಾರಾಸಗಟು ನಿರ್ನಾಮವಾದ ಹಾಗೆ, ಒಂದಿಡೀ ಪ್ರಾಣಿ ಸಮೂಹವೇ ಕೆಲವೊಮ್ಮೆ ಅಳಿದು ಹೋಗಬಹುದು. ಕೋರೆ ದಂತದ ಮಾಸ್ಟೊಡಾನ್, ರೋಮರಂಜಿತ ಮ್ಯಾಮತ್ (ಎರಡೂ ಆನೆಗೆ ಹೋಲಿಸಬಹುದಾದಂಥವು) ಮುಂತಾದ ಭಾರೀ ಗಾತ್ರದ ಸ್ತನಿಗಳೂ ಹೀಗೆ ನಿರ್ವಂಶವಾಗಿವೆ. ಹೀಗೆ ಇನ್ನಿತರ ಅಸಂಖ್ಯ ಪ್ರಾಣಿಗಳೂ ಸಸ್ಯಗಳೂ ಉಗಮವಾಗಿ, ವಿಕಾಸಗೊಂಡು, ನಂತರ ಕಣ್ಮರೆಯಾಗಿವೆ. ಭೂಕವಚದಲ್ಲಿ ಪಳೆಯುಳಿಕೆಗಳ ರೂಪದಲ್ಲಿ ಕಂಡುಬರುವ ಶಿಲಾದಾಖಲೆಗಳ ಮೂಲಕವಷ್ಟೇ ಅವುಗಳ ಬಗ್ಗೆ ನಮಗೆ ಗೊತ್ತಾಗಿದೆ. ಹೀಗೆ ನಿರ್ವಂಶವಾದ ಸಂತತಿ ಮತ್ತೆ ಸೃಷ್ಟಿಯಾಗಲಾರದು. ಅದು ಏಕಮುಖ ಘಟನೆ. ಕೋಟ್ಯಂತರ ವರ್ಷಗಳ ಬಹುದೀರ್ಘ ಅವಧಿಯ ವಿಕಾಸಪಥದಲ್ಲಿ ಹೊಸ ಹೊಸ ಸಾಮರ್ಥ್ಯದ ಜೀವಿಗಳ ಉಗಮಕ್ರಿಯೆಯಲ್ಲಿ ಇಂಥ ಅಳಿವು ಅನಿವಾರ್ಯವೂ ಹೌದು. ಡಾರ್ವಿನ್ ಮಂಡಿಸಿದ ವಿಕಾಸವಾದದಲ್ಲಿ ಹೊಸ ಜೀವಿಗಳ ಉಗಮವಾಗುವಾಗ ನೈಸರ್ಗಿಕ ಆಯ್ಕೆ ಹೇಗೆ ನಡೆಯುತ್ತದೆಂಬ ತಾರ್ಕಿಕ ವಿವರಣೆಗಳಿವೆ. ಪರಿಸರಕ್ಕೆ ಹೊಂದಿಕೊಂಡು ಯಶಸ್ವಿಯಾಗಿ ಬದುಕಬಲ್ಲ ಹಾಗೂ ವಂಶಾಭಿವೃದ್ಧಿ ಮಾಡಬಲ್ಲ ಜೀವಿಗಳನ್ನು ಮಾತ್ರ ನಿಸರ್ಗ ಆಯ್ಕೆ ಮಾಡುತ್ತದೆ ಎಂಬುದೇ ಡಾರ್ವಿನ್ ವಿಕಾಸವಾದಕ್ಕೆ ನೀಡಿದ ಅತ್ಯಂತ ಮಹತ್ವದ ಕೊಡುಗೆಯಾಗಿದೆ.

ಮನುಷ್ಯ ಅವತರಿಸುವ ಎಷ್ಟೋ ಲಕ್ಷಾಂತರ ವರ್ಷಗಳ ಹಿಂದೆಯೇ ಅನೇಕ ಜೀವಸಂಕುಲಗಳು ನಿರ್ನಾಮವಾಗಿವೆ. ಆದಿಮಾನವರು ನಿಸರ್ಗದೊಂದಿಗೆ ಸಹಬಾಳ್ವೆ ಮಾಡಲು ಕಲಿತಿದ್ದರಿಂದ ಅವರಿಂದಾಗಿ ಯಾವ ಜೀವಿಗಳೂ ನಿರ್ವಂಶವಾಗಲಿಲ್ಲ. ಆದರೆ ನಾಗರಿಕತೆ ವಿಶ್ವವ್ಯಾಪಿಯಾಗುತ್ತ ಬಂದು, ನಿಸರ್ಗದ ಸಂಪನ್ಮೂಲಗಳ

ಬಳಕೆಯ ಪ್ರಮಾಣ ಹೆಚ್ಚುತ್ತ ಬಂದಹಾಗೆ, ವನ್ಯಜೀವಿಗಳ ಮೇಲೆ ವ್ಯತಿರಿಕ್ತ ಪರಿಣಾಮವಾಗತೊಡಗಿದೆ. ಮೃಗಬೇಟೆ, ಪರಿಸರ ಬದಲಾವಣೆ, ವನ್ಯ ವಾಸಕ್ಷೇತ್ರದ ಧ್ವಂಸ, ನೀರು, ಭೂಮಿ ಹಾಗೂ ವಾಯುಮಾಲಿನ್ಯ, ಮಾನವ ಜನಸಂಖ್ಯಾ ಸ್ಫೋಟ ಇವೆಲ್ಲವೂ ಇತ್ತೀಚಿನ ವರ್ಷಗಳಲ್ಲಿ ವನ್ಯಪ್ರಾಣಿಗಳ ನಿರ್ವಂಶಕ್ಕೆ ಕಾರಣವಾಗುತ್ತಿವೆ. ಹದಿನೇಳನೆ ಶತಮಾನದ ಈಚೆಗೆ ಸುಮಾರು 120 ಸ್ತನಿಗಳು ಹಾಗೂ 150 ಪಕ್ಷಿವಂಶಗಳು ನಿರ್ನಾಮವಾಗಿವೆ. ಔದ್ಯಮಿಕ ಯುಗದ ಆರಂಭವಾದಾಗಿನೀಚೆಗೆ ಮಾನವನ ಹಸ್ತಕ್ಷೇಪದಿಂದಾಗಿಯೇ ಪ್ರಾಣಿಗಳ ನಿರ್ವಂಶದ ಗತಿಯೂ ತೀವ್ರವಾಗುತ್ತ ಬಂದಿದೆ.

'ಡೋಡೋ' *(Raphus cucullatus)* ಎಂಬ ಮಾರಿಷಸ್ ದ್ವೀಪದ ಪಕ್ಷಿ, ಉತ್ತರ ಅಮೆರಿಕದ ಪ್ಯಾಸೆಂಜರ್ ಪಾರಿವಾಳ *(Ectopistes migratorius)*, ಮಡಗಾಸ್ಕರಿನ ಆನೆ ಹಕ್ಕಿ *(Aepyornis maximus)*, ಫ್ಲೋರಿಡಾದ ಬಣ್ಣದ ಹದ್ದು *(Sarcorhampus sacra)*, ದಕ್ಷಿಣ ಆಫ್ರಿಕದ ಭೂಶಿರ ಸಿಂಹ *(Panthera leo melanochaitus)* ಮತ್ತು ಕಗ್ಗಾ *(Equus burchelli quagga)* ಇವೆಲ್ಲ ಕಳೆದ ಕೆಲವೇ ಶತಮಾನಗಳಲ್ಲಿ ನಿರ್ನಾಮಗೊಂಡ ಪ್ರಾಣಿವಂಶಗಳ ಉದಾಹರಣೆಗಳಾಗಿವೆ.

ಭಾರತದಲ್ಲಿ ಚೀತಾ *(Acinonyx jubatus venaticus* – ಗ್ರಿಫಿತ್*)*, ಕಿರುಗಾತ್ರದ ಒಂಟಿಕೊಂಬಿನ ಘೇಂಡಾ *(Rhinoceros Sondaicus desmarest)*, ಗುಲಾಬಿ ಶಿರದ ಬಾತು *(Rhodonessa caryophyllacea)*, ಬೆಟ್ಟದ ಕೋಳಿ *(Ophrysia superciliosa)* ಇವೆಲ್ಲ ಈ ಶತಮಾನದಲ್ಲೇ ನಿರ್ವಂಶವಾಗಿವೆ. ಅನೇಕ ಸ್ತನಿಗಳು ಮತ್ತು ಪಕ್ಷಿಗಳು ಅಪರೂಪವಾಗುತ್ತಿದ್ದು ಅವಸಾನದ ಅಂಚಿಗೆ ಬಂದಿವೆ. ಅರಣ್ಯನಾಶದ ಗತಿ ತೀವ್ರವಾಗುತ್ತ ಬಂದ ಹಾಗೆಲ್ಲ, ನೈಸರ್ಗಿಕ ವಾಸಕ್ಷೇತ್ರವೂ ಕಿರಿದಾಗುತ್ತ ಬಂದು, ವನ್ಯಜೀವಿಗಳು ಇಕ್ಕಟ್ಟಿನ ಪರಿಸರದಲ್ಲಿ ಬದುಕುವಂತಾಗಿದೆ.

## ವನ್ಯಜೀವಿಗಳು ಅವಸಾನ ಸ್ಥಿತಿಗೆ ಬರುವ ಪರಿ

ಪ್ರಾಣಿಗಳು ನೈಸರ್ಗಿಕವಾಗಿ ನಿರ್ವಂಶವಾಗುವುದು ಪ್ರಕೃತಿಯೇ ಆಯ್ಕೆ ಮಾಡಿಕೊಂಡ ವಿಕಾಸ ವಿಧಾನ. ವಿಕಾಸಪಥದಲ್ಲಿ ಪರಿಸರ ಪರಿಸ್ಥಿತಿ ಬದಲಾಗುತ್ತಿರುವ ಹಾಗೆ ಅದಕ್ಕೆ ಹೊಂದಿಕೊಂಡು ಬದುಕಬಲ್ಲ ಸಾಮರ್ಥ್ಯವುಳ್ಳ ಹೊಸ ಪ್ರಾಣಿಗಳ ಉದಯಕ್ಕೆ ಹಾದಿ ಮಾಡಿಕೊಡುವ ರೀತಿ ಇದು. ಆದರೆ ಇತ್ತೀಚಿನ ಇತಿಹಾಸದಲ್ಲಿ ಅನೇಕ ಜೀವಿಗಳು ನಿರ್ನಾಮವಾಗಲಿಕ್ಕೆ ಮನುಷ್ಯನ ವಿಧ್ವಂಸಕ ಕೃತ್ಯಗಳೇ ಕಾರಣವಾಗಿವೆ. ಡೊಡೊ, ಪ್ಯಾಸೆಂಜರ್ ಪಾರಿವಾಳ ಮತ್ತು ಭಾರತದ ಚೀತಾ ಇವೆಲ್ಲ ನಿಸರ್ಗದ ವಿಕಾಸದಿಂದಾಗಿ ನಿರ್ನಾಮವಾಗಿಲ್ಲ. ಅವೆಲ್ಲವನ್ನೂ ಹೇಳಹೆಸರಿಲ್ಲದಂತೆ ಬೇಟೆಯಾಡಿಯೇ ಮುಗಿಸಲಾಗಿದೆ. ಶೀಘ್ರ ಹೆಚ್ಚುತ್ತಿರುವ ಔದ್ಯಮೀಕರಣ, ಸಂಪನ್ಮೂಲಗಳ ವಿಪರೀತ ಬಳಕೆಯೇ ಮುಂತಾದ ಮಾನವ ಕೃತ್ಯಗಳ ಪರಿಣಾಮ ಭೂಮಿ, ನೀರು, ಗಾಳಿ, ಸಸ್ಯ ಮತ್ತು ಪ್ರಾಣಿಗಳ ಪರಿಸರದ ಮೇಲೆ ಆಗಿದ್ದರಿಂದಲೇ ಅನೇಕ ಜೀವಿಗಳು ನಿರ್ವಂಶವಾಗಿವೆ, ಇನ್ನು ಹಲವು ಜೀವಿಗಳು 'ಪ್ರತೀಕ್ಷಾ ಪಟ್ಟಿ'ಯಲ್ಲಿ ಸೇರಿವೆ.

ಇಲ್ಲಿ ಹೇಳಿದ 'ಪ್ರತೀಕ್ಷಾ ಪಟ್ಟಿ'ಯಲ್ಲಿ ಬರುವ ಬಹುಸಂಖ್ಯಾತ ಪ್ರಾಣಿಗಳ ಸ್ಥಿತಿಗತಿ ಹೇಗಿದೆಯೆಂದರೆ, ನಾವೀಗ ತುರ್ತು ಗಮನ ಹರಿಸದಿದ್ದರೆ ಅವೆಲ್ಲ ನಿರ್ವಂಶವಾಗುತ್ತವೆ. ವಿಸ್ತೀರ್ಣವಾಗುತ್ತಿರುವ ನಗರಗಳು, ನಾಶವಾಗುತ್ತಿರುವ ಅರಣ್ಯಗಳು, ರಸ್ತೆ ನಿರ್ಮಾಣ, ರೈಲು ಮಾರ್ಗದ ನಿರ್ಮಾಣ, ಅಣೆಕಟ್ಟುಗಳ ನಿರ್ಮಾಣ, ಕೀಟನಾಶಕಗಳ ಅತಿಬಳಕೆಯ ಕೃಷಿ ಚಟುವಟಿಕೆ, ಮಾಲಿನ್ಯ ಮತ್ತು ಕಳ್ಳಬೇಟೆ ಇವೆಲ್ಲ ಸೇರಿ ವನ್ಯಪ್ರಾಣಿಗಳ ಸಂಖ್ಯೆ ಇಳಿಮುಖವಾಗಲು ಕಾರಣವಾಗುತ್ತಲೇ, ಅಳಿದುಳಿದವುಗಳ ವಾಸಕ್ಷೇತ್ರ ಕ್ಷೀಣಿಸಲಿಕ್ಕೂ ಕಾರಣವಾಗುತ್ತಿವೆ.

## ನೆಲೆ ನಾಶ

ನೀವಿರುವ ಸ್ಥಳದಲ್ಲಿ ಒಂದು ಫ್ಯಾಕ್ಟರಿಯೋ ಅಥವಾ ಫುಟ್‌ಬಾಲ್ ಕ್ರೀಡಾಂಗಣವೋ ಬರಲಿಕ್ಕಿದೆ ಎಂದು ಊಹಿಸಿಕೊಳ್ಳಿ. ನಿಮಗರಿವಾಗುವ ಮೊದಲೇ ಹಠಾತ್ತಾಗಿ ಬುಲ್‌ಡೋಜರ್ ಬಂದು ನಿಮ್ಮ ಮನೆಯನ್ನು ಕೆಡವಿ, ನಿಮ್ಮ ಮನೆಯವರನ್ನು ಕೊಂದೋ ಗಾಯಗೊಳಿಸಿಯೋ ಇಡೀ ಕ್ಷೇತ್ರವನ್ನೇ ಹೊಸಕಿ ಹಾಕಿ ಹೋದರೆ ಹೇಗನ್ನಿಸುತ್ತದೆ ? ನೀವು ಯಾರಲ್ಲಿಯೂ ದೂರುವಂತಿಲ್ಲ, ಎಲ್ಲಿಗೂ ಹೋಗುವಂತಿಲ್ಲ; ಬಿಸಿಲು, ಗಾಳಿ, ಮಳೆ ಚಳಿಗೆ ಸಿಕ್ಕಿ, ಹಸಿವೆ ನೀರಡಿಕೆ ಹಾಗೂ ರೋಗರುಜಿನಗಳಿಗೆ ಬಲಿಯಾಗುತ್ತೀರಿ. ನಿಮ್ಮ ವಂಶದ ಕುಡಿ ಎಲ್ಲೋ ಎದ್ದುಬಿದ್ದು ದೂರ ಸಾಗಿ ಬದುಕುಳಿಯಲು ಯತ್ನಿಸುತ್ತದೆ; ಯಶಸ್ಸು ಸಿಕ್ಕೀತು, ಸೋತು ನಾಮಾವಶೇಷವಾದೀತು. ಮನುಷ್ಯನ 'ಅಭಿವೃದ್ಧಿ'ಯ ಆಕಾಂಕ್ಷೆ ಹಾಗೂ ಅವನ ಅತಿ ಪ್ರಸರಣದಿಂದಾಗಿ ವನ್ಯಜೀವಿಗಳಿಗೆ ಯಥಾವತ್ ಇದೇ ಸ್ಥಿತಿ ಬಂದಿದೆ.

ಅರಣ್ಯನಾಶವೇ ವನ್ಯಜೀವಿಗಳ ನಿರ್ನಾಮಕ್ಕೆ ಬಹುಮಟ್ಟಿಗೆ ಕಾರಣವಾಗಿದೆ. ಹೆಚ್ಚುತ್ತಿರುವ ಜನಸಂಖ್ಯೆ ಹಾಗೂ ಸಂಪನ್ಮೂಲ ಬೇಡಿಕೆಯಿಂದಾಗಿ ಅರಣ್ಯಗಳ ಚೊಕ್ಕಟ ನಾಶ ಇಲ್ಲವೇ ಒತ್ತುವರಿ ಸದಾ ನಡೆಯುತ್ತಿದೆ. ಕೃಷಿ ವಿಸ್ತರಣೆಗಾಗಿ, ಇಲ್ಲವೇ ನಗರ ನಿರ್ಮಾಣಕ್ಕಾಗಿ, ಇಲ್ಲವೇ ದನಕರುಗಳನ್ನು ಮೇಯಿಸಲಿಕ್ಕಾಗಿ ಅರಣ್ಯಗಳು ಬಲಿಯಾಗುತ್ತಿವೆ. ಮಾನವನ ಅಭಿವೃದ್ಧಿ ಹಾಗೂ ತಾಂತ್ರಿಕ ಪ್ರಗತಿಯಿಂದಾಗಿ ಸಂಪನ್ಮೂಲಗಳ ಬಳಕೆಯ ಗತಿ ತೀವ್ರವಾಗುತ್ತಿದೆ. ಮನೆ ಕಟ್ಟಲಿಕ್ಕೆ, ಪೀಠೋಪಕರಣ ತಯಾರಿಸಲಿಕ್ಕೆ ಹಾಗೂ ಉರುವಲ ಸೌದೆಗೆಂದು ಅರಣ್ಯಗಳು ನಾಶವಾಗುತ್ತಿವೆ. ಕಾಗದ ತಯಾರಿಕೆಗೆ, ಅಂಟು, ರಾಳಗಳ ಉತ್ಪನ್ನಕ್ಕೆ, ಖನಿಜ ವಸ್ತುಗಳ ಗಣಿ ಕೆಲಸಕ್ಕೆ, ಕಟ್ಟಡ ನಿರ್ಮಾಣ ಚಟುವಟಿಕೆಯೇ ಮುಂತಾದ ಔದ್ಯಮಿಕ ಉದ್ದೇಶಗಳ ಪೂರೈಕೆಗೆಂದು ಆರಣ್ಯಗಳು ಬಲಿಯಾಗುತ್ತಿವೆ.

ಇದರಿಂದ ವನ್ಯಜೀವಿಗಳ ಆಹಾರ ಮೂಲಗಳು ಬರಿದಾಗುತ್ತವೆ. ಸಂತಾನೋತ್ಪತ್ತಿ ಕ್ರಿಯೆ ಕ್ಷೀಣವಾಗುತ್ತದೆ; ಮರಿಗಳ ಪಾಲನೆ ಪೋಷಣೆಗೆ ಗೂಡು ಕಟ್ಟುವುದೂ ಅಸಾಧ್ಯವಾಗುತ್ತದೆ. ಬವಲಾದ ಪರಿಸರಕ್ಕೆ ಹೊಂದಿಕೊಳ್ಳಬೇಕೋ, ವಲಸೆ ಹೋಗಬೇಕೋ, ಇದ್ದಲ್ಲೇ ಅಂತ್ಯ ಕಾಣಬೇಕೋ ವನ್ಯಜೀವಿಗಳಿಗೆ ಬೇರೆ ಮಾರ್ಗ ಉಳಿಯುತ್ತಿಲ್ಲ. ಅವುಗಳ ವಾಸಕ್ಷೇತ್ರ ಈ ಸ್ಥಿತಿಗೆ ಬರುತ್ತಿರುವುದರಿಂದ ನಮ್ಮ ದೇಶದ

ಅನೇಕ ಪ್ರಾಣಿ ಸಂಕುಲಗಳು ಅಪರೂಪವಾಗುತ್ತಿವೆ. ವಿನಾಶದ ಅಂಚಿಗೆ ಬಂದಿವೆ. ನಮ್ಮ ಪ್ರಗತಿ ಮತ್ತೂ ಏಳಿಗೆಯ ಪೈಪೋಟಿಯಲ್ಲಿ ನಾವು ನಿಸರ್ಗದ ಸೂಕ್ಷ್ಮ ಸಮತೋಲವನ್ನು ಬಿಗಡಾಯಿಸಿದ್ದೇವೆ.

## ಮೃಗಹತ್ಯೆ ಮತ್ತು ಕಳ್ಳಬೇಟೆ

ಮನರಂಜನೆಗಾಗಿ, ಆಹಾರಕ್ಕಾಗಿ, ದಂತಕ್ಕಾಗಿ, ಚರ್ಮಕ್ಕಾಗಿ, ಉಣ್ಣೆಗಾಗಿ, ಕೊಂಬಿಗಾಗಿ ವನ್ಯಮೃಗಗಳನ್ನು ಬೇಟೆಯಾಡಿ ಕೊಲ್ಲುವುದು ಈಗಲೂ ನಡೆದೇ ಇದೆ. ಭಾರತದಲ್ಲಿ ಚೀತಾಗಳನ್ನು ಬೇಟೆಯಾಡಿಯೇ ನಿರ್ವಂಶ ಮಾಡಿದ್ದಾಯಿತು. ಚರ್ಮದ ಕಳ್ಳವ್ಯಾಪಾರಕ್ಕೆಂದೇ ಹುಲಿ, ಚಿರತೆ, ಜಿಂಕೆ, ಮೀನುಬೆಕ್ಕು, ಮೊಸಳೆ, ಹಾವು ಹಾಗೆಯೇ ಸುಂದರ ಗರಿಗಳ ಪಕ್ಷಿಗಳು ಲೆಕ್ಕ ಸಂಖ್ಯೆಯಿಲ್ಲದ ಪ್ರಮಾಣದಲ್ಲಿ ಹತವಾಗಿವೆ. ಆನೆಗಳು ದಂತಚೋರರಿಂದಾಗಿಯೇ ಸಾವಪ್ಪಿವೆ. ಘೇಂಡಾ ಕೊಂಬಿನಲ್ಲಿ ಕಾಮೋದ್ದೀಪಕ ಅಂಶಗಳಿವೆಯೆಂಬ ಮೂಢ ಕಲ್ಪನೆಯಿಂದಾಗಿಯೇ ಅನೇಕ ಘೇಂಡಾಮೃಗಗಳು ಬಲಿಯಾಗುತ್ತಿವೆ. ಇಂಥ ಬೇಟೆಯನ್ನೂ ಕಳ್ಳಸಾಗಣೆಯನ್ನೂ ನಿರ್ಬಂಧಿಸಲು ನಮ್ಮ ದೇಶದಲ್ಲಿ ಕಾನೂನುಗಳಿವೆಯಾದರೂ, ಆಶೆಬುರುಕರು, ವ್ಯಾಪಾರಿಗಳು ಹಾಗೂ ನಿರ್ಯಾತಗಾರರು ಅಂಥ ಕಾನೂನುಗಳನ್ನೆಲ್ಲ ಉಲ್ಲಂಘಿಸುತ್ತಾರೆ. ಇದು ಸಾಲದೆಂಬಂತೆ ವೈದ್ಯಕೀಯ ಸಂಶೋಧನೆಗೆಂದು, ಅಪರೂಪದ ಜೀವಂತ ವನ್ಯ ಸ್ತನಿ, ಪಕ್ಷಿ ಹಾಗೂ ಉರಗಗಳ ಮಾರಾಟ ನಡೆಯುತ್ತದೆ.

## ಮಾಲಿನ್ಯ

ಔದ್ಯಮಿಕ ಚಟುವಟಿಕೆಗಳಿಂದಾಗಿ ನೆಲ, ಜಲ, ವಾಯುಮಾಲಿನ್ಯ ಉಂಟಾದರೆ ಅದರ ವಿಪರೀತ ಪರಿಣಾಮ ಕೇವಲ ನಮ್ಮ ಆರೋಗ್ಯದ ಮೇಲಷ್ಟೇ ಅಲ್ಲ, ಇತರ ಪ್ರಾಣಿಗಳ ಆರೋಗ್ಯ ಹಾಗೂ ಸುಸ್ಥಿತಿಯ ಮೇಲೂ ಕಂಡುಬರುತ್ತದೆ. ಕೈಗಾರಿಕಾ ಸ್ಥಾವರಗಳಿಂದ ಹೊರಬೀಳುವ ಕೊಳಚೆ ಪದಾರ್ಥಗಳು ಕೆರೆಗೆ, ನದಿಗೆ ಹಾಗೂ ಸಾಗರಕ್ಕೂ ಸೇರಿ ಜಲಚರಗಳ ಮೇಲೆ ದುಷ್ಪರಿಣಾಮ ಉಂಟು ಮಾಡುತ್ತವೆ. ಡಿಡಿಟಿ ಮತ್ತು ಡೀಲ್‌ಡ್ರಿನ್‌ನಂಥ ಕೀಟನಾಶಕಗಳು ಮನುಷ್ಯನಿಗೆ ಉಪಕಾರಿಯಾದ ಹಲವು ಕೀಟಗಳನ್ನು ನಾಶ ಮಾಡುವುದರ ಜತೆಗೇ, ವನ್ಯಸ್ತೋಮವನ್ನೂ ಕಷ್ಟಕ್ಕೀಡು ಮಾಡುತ್ತವೆ.

ಎರಡನೇ ಮಹಾಯುದ್ಧದ ತರುವಾಯ ಸೊಳ್ಳೆ ನಿಯಂತ್ರಣಕ್ಕೆಂದು ಡಿಡಿಟಿಯನ್ನು ವ್ಯಾಪಕವಾಗಿ ಬಳಸಿದ ಮೇಲೆ, ಈಗ ಕೃಷಿ ಭೂಮಿಯಲ್ಲಿನ ಮತ್ತು ಗೋದಾಮುಗಳ ಕೀಟ ನಿಯಂತ್ರಣಕ್ಕೆ ಬಳಸಲಾಗುತ್ತಿದೆ. ಡಿಡಿಟಿಯ ಸೇವನೆ ಮಾಡಿದರೆ ಅದು ಮಲಮೂತ್ರದೊಂದಿಗೆ ವಿಸರ್ಜನೆಯಾಗುವ ಬದಲು, ದೇಹದ ಅಂಗಾಂಶಗಳಲ್ಲಿ ಶೇಖರವಾಗುತ್ತದೆ. ಇಂಥ ವಿಷಪೂರಿತ ಕೀಟಗಳನ್ನು ಭಕ್ಷಿಸುವ ಏಡಿ, ಕಪ್ಪೆ, ಮೀನುಗಳಲ್ಲೂ ಡಿಡಿಟಿ ಶೇಖರವಾಗಿ, ಅಂತಿಮವಾಗಿ ಇದು ಮನುಷ್ಯರ

ದೇಹಕ್ಕೂ ಸೇರ್ಪಡೆಯಾಗುತ್ತದೆ. ವಿಷಯುಕ್ತ ರಸಾಯನಗಳ ಹಾಗೂ ಕೀಟನಾಶಕಗಳ ಇಂಥ 'ಜೈವಿಕ ಪ್ರಸರಣ' ಕ್ರಿಯೆಯನ್ನು ನೀರಿನಲ್ಲೂ ಕಾಣಬಹುದು. ಕೆರೆಗೆ, ನದಿಗೆ ಸೇರುವ ಔದ್ಯಮಿಕ ಕೊಳಚೆ ರಸಾಯನಗಳಲ್ಲಿ ಪಾದರಸ, ಸೀಸ, ತಾಮ್ರ ಮುಂತಾದ ಭಾರಲೋಹಗಳ ಸಂಯುಕ್ತಗಳು ಕರಗಿದ್ದು ಕ್ರಮೇಣ ಇವು ಜಲಚರಗಳ ದೇಹಗಳಲ್ಲಿ ಶೇಖರವಾಗುತ್ತವೆ. ಆಹಾರ ಸರಪಳಿಯಲ್ಲಿ ಕೆಳಗಿನ ಹಂತದ ಜೀವಿಯನ್ನು ಮೇಲಿನ ಹಂತದ ಜೀವಿಗಳು ತಿನ್ನುವಾಗ ಈ ವಿಷಯುಕ್ತ ರಸಾಯನಗಳೂ ಭಾರಲೋಹ ಕಣಗಳೂ ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಮೇಲಿನ ಹಂತದ ಜೀವಿಗಳ ದೇಹದಲ್ಲಿ ಸೇರ್ಪಡೆಯಾಗುತ್ತವೆ.

ಡಿಡಿಟಿಯಿಂದಾಗಿ ಪಕ್ಷಿಗಳ ಮೇಲೆ, ಅದರಲ್ಲೂ ಕಡಲ ಪಕ್ಷಿಗಳ ಮೇಲೆ ಭಾರೀ ದುಷ್ಪರಿಣಾಮ ಕಂಡುಬರುತ್ತದೆ. ಹಕ್ಕಿಯ ಮೊಟ್ಟೆಗಳ ಕವಚ ತುಂಬ ತೆಳುವಾಗುವುದರಿಂದ ಕಾವು ಕೊಡಲು ಕೂತ ತಾಯಿಯ ದೇಹದ ಭಾರಕ್ಕೇ ಅವು ಒಡೆದು ಹಾಳಾಗುತ್ತವೆ.

ಸಮುದ್ರದಲ್ಲಿ ಸಂಚರಿಸುವ ಹಡಗುಗಳಿಂದ ಸದಾ ಎಣ್ಣೆ ಜಿಡ್ಡು ಜಿನುಗುತ್ತದೆ. ತೈಲ ಸಾಗಣೆ ಹಡಗುಗಳು ಅಪಘಾತಕ್ಕೀಡಾದರಂತೂ ಎಣ್ಣೆ ಜಿಡ್ಡಿನ ಮಾಲಿನ್ಯ ಗಂಭೀರ ಸ್ವರೂಪಪಡ್ದಾಗುತ್ತದೆ. ಇತ್ತೀಚಿನ ಕೊಲ್ಲಿ ಯುದ್ಧದ ಸಂದರ್ಭದಲ್ಲಿ ಮನುಷ್ಯನ ಚಟುವಟಿಕೆಗಳಿಂದಾಗಿ ನೈಸರ್ಗಿಕ ಜೀವಮಂಡಲದ ಮೇಲೆ ಎಂಥ ವಿಧ್ವಂಸಕ ಪರಿಣಾಮ ಉಂಟಾಗಬಲ್ಲುದೆಂಬ ಪ್ರಾತ್ಯಕ್ಷಿಕೆ ನಮಗೆ ದೊರಕಿದೆ. ಎಣ್ಣೆ ಜಿಡ್ಡು ಕಡಲ ಪಕ್ಷಿಗಳ ಮೈಗೆಲ್ಲ ಅಂಟಿಕೊಂಡು, ಅವುಗಳ ಜೀರ್ಣಾಂಗದೊಳಕ್ಕೂ ಸೇರಿ, ಉಸಿರಾಡಲೂ ಆಗದಂತೆ ಮಾಡುತ್ತದೆ. ನೀರಲ್ಲಿ ಜೀವಿಸುವ ಚಿಕ್ಕಪುಟ್ಟ ಪ್ರಾಣಿಗಳನ್ನೂ, ಸಸ್ಯಗಳನ್ನೂ ನಾಶ ಮಾಡಿ, ಕೊನೆಗೆ ಇವುಗಳನ್ನೇ ಆಹಾರವನ್ನಾಗಿ ಭಕ್ಷಿಸಬೇಕಿದ್ದ ಮೀನುಗಳ ಮೇಲೂ ದುಷ್ಪರಿಣಾಮ ಬೀರುತ್ತದೆ.

ಮನುಷ್ಯನ ಹಸ್ತಕ್ಷೇಪದಿಂದಲೇ ವನ್ಯಸ್ತೋಮ ಹೇಗೆ ಕ್ಷೀಣಿಸುತ್ತದೆಂಬುದಕ್ಕೆ ಇನ್ನು ಅನೇಕ ಕಾರಣಗಳೂ ಉದಾಹರಣೆಗಳೂ ಇವೆ. ಸಮತೋಲವಿಲ್ಲದ ಬೇಸಾಯ ಚಟುವಟಿಕೆ, ದೂರದ ಜೀವಿಗಳ ಆಮದು, ಸಾಕುಪ್ರಾಣಿಗಳ ಮೂಲಕ ಬರುವ ಸೋಂಕುರೋಗ, ನದಿಗೆ ಅಡ್ಡಲಾಗಿ ನಿರ್ಮಿಸುವ ಅಣೆಕಟ್ಟುಗಳು, ಅರಣ್ಯನಾಶದಿಂದಾಗಿ ಬರುವ ಮಹಾಪೂರ ಹಾಗೂ ಬರಗಾಲ ಇವೆಲ್ಲವೂ ಒಟ್ಟೊಟ್ಟಾಗಿ, ಒಂದೊಂದಾಗಿ ವನ್ಯಜೀವಿ ಸಂಕುಲಕ್ಕೆ ಮಾರಕವಾಗುತ್ತವೆ; ಜೀವಿಗಳನ್ನು ವಿನಾಶದ ಅಂಚಿಗೆ ತಂದು ನಿಲ್ಲಿಸುತ್ತವೆ. ಯಾವುದೇ ಪ್ರಾಣಿವಂಶ ವಿನಾಶದ ಅಂಚಿಗೆ ಬಂತೆಂದು ಹೇಗೆ ಗೊತ್ತಾಗುತ್ತದೆ? ಯಾವುದೇ ಪ್ರಾಣಿಯ ಸಂಖ್ಯೆ ತೀರ ಸಂದಿಗ್ಧ ಮಟ್ಟಕ್ಕೆ ಇಳಿದಾಗ, ಅಥವಾ ತುರ್ತು ಸಂರಕ್ಷಣಾ ಕ್ರಮ ಕೈಗೊಂಡ ಹೊರತು ಪೀಳಿಗೆ ನಿರ್ವಂಶವೇ ಆಗುತ್ತದೆಂಬಷ್ಟರ ಮಟ್ಟಿಗೆ ಅವುಗಳ ವಾಸಕ್ಷೇತ್ರ ಕ್ಷೀಣಿಸಿದಾಗ ಆ ಪ್ರಾಣಿ ಅಳಿವಿನ ಅಂಚಿಗೆ ಬಂತೆಂದು ಹೇಳುತ್ತೇವೆ.

## ಈಗಲೂ ಕಾಲ ಮಿಂಚಿಲ್ಲ !

ನಮ್ಮ ವನ್ಯಲೋಕ ಹೀಗೆ ಬರಿದಾಗುತ್ತಿದ್ದರೂ, ಕೆಲವು ಪ್ರಾಣಿಗಳ ಸಂಖ್ಯೆ ಕಮ್ಮಿಯಾಗುತ್ತಿದ್ದರೂ, ಭಾರತದಲ್ಲಿ ಇಂಥ ಸರ್ವನಾಶದ ಅಲೆಯನ್ನು ಹಿಮ್ಮೊಗ್ಗ ತಿರುಗಿಸುವ ಹಾಗೂ ಸಂರಕ್ಷಣಾ ಕ್ರಮ ಕೈಗೊಳ್ಳುವ ಸಾಧ್ಯತೆ ಈಗಲೂ ಇದೆ. ಈಗಲೂ ನಮ್ಮ ದೇಶದಲ್ಲಿ ವನ್ಯಜೀವ ಜಗತ್ತು ವೈವಿಧ್ಯಮಯವಾಗಿದೆ; ಸಮೃದ್ಧವಾಗಿದೆ. ಈ ದೇಶದ ಪ್ರಾಣಿಸ್ತೋಮ ಮತ್ತು ಸಸ್ಯಸ್ತೋಮದ ಸಂರಕ್ಷಣೆಗೆ ಈಗೀಗ ಶ್ರದ್ಧಾಪೂರ್ವಕ ಪ್ರಯತ್ನಗಳು ನಡೆಯುತ್ತಿವೆ. (ಇಂಥ ಕೆಲವು ಯತ್ನಗಳ ಬಗ್ಗೆ ಬೇರೊಂದು ಅಧ್ಯಾಯದಲ್ಲಿ ಚರ್ಚಿಸಲಾಗಿದೆ).

ಸಂರಕ್ಷಣೆಯೆಂದರೆ ಏನಕೇನ ಪ್ರಕಾರದಲ್ಲಿ ಮನುಷ್ಯನ ಹಿತವನ್ನು ಕಡೆಗಣಿಸಿ, ವನ್ಯಪ್ರಾಣಿಗಳನ್ನು ಹಿಂದಿನಂತೆಯೇ ಅಲೆಯಲು ಬಿಡುವುದಲ್ಲ. ಸಂರಕ್ಷಣೆಯೆಂದರೆ ನಿಸರ್ಗ ಕ್ಷೀಣಿಸದ ರೀತಿಯಲ್ಲಿ ಪ್ರಾಕೃತಿಕ ಸಂಪತ್ತನ್ನು ಬಳಸಿಕೊಳ್ಳುವುದು. ನಿಸರ್ಗವೇ ಎಲ್ಲ ಜೀವಗಳಿಗೂ ಆಶ್ರಯದಾತ. ನಮ್ಮ ಎಲ್ಲಾ ಬಗೆಯ ಅಗತ್ಯಗಳಿಗೂ ನಾವು ನಿಸರ್ಗವನ್ನೇ ಅವಲಂಬಿಸಿರುತ್ತೇವೆ. ಈ ನಿಸರ್ಗದ ಸಂಪನ್ಮೂಲಗಳ ಅತಿ ಬಳಕೆ ಮಾಡಿದರೆ ಅನಂತ ಕಾಲದವರೆಗೆ ಅದು ಉಳಿಯಲಾರದು. ಸಂರಕ್ಷಣೆ ನಾಲ್ಕು ಸ್ತಂಭಗಳ ಆಧಾರದ ಮೇಲೆ ನಿಂತಿದೆಯೆಂದು ಬಲ್ಲವರು ಹೇಳುತ್ತಾರೆ. ಮೊದಲ ಸ್ತಂಭವೆಂದರೆ ನಮ್ಮ ನೈತಿಕ ಕಳಕಳಿ ಅಥವಾ ನೈತಿಕ ಪ್ರಜ್ಞೆ. ಇಂದಿನ ನೈಸರ್ಗಿಕ ಸಂಪತ್ತನ್ನು ನಮ್ಮ ಮುಂದಿನ ಪೀಳಿಗೆಗೂ ಉಳಿಸಬೇಕೆಂಬ ಪ್ರಜ್ಞೆಯಿದ್ದರೆ, ಇಂದಿನದು ಪೂರ್ತಿಯಾಗಿ ನಶಿಸದಂತೆ ನೋಡಿಕೊಳ್ಳಬೇಕಾದ ನೈತಿಕ ಹೊಣೆಗಾರಿಕೆಯೂ ನಮ್ಮದಾಗಿರುತ್ತದೆ. ಎರಡನೇ ಸ್ತಂಭವೆಂದರೆ ರಸಾಭಿಜ್ಞತೆ ಅಥವಾ ಸೌಂದರ್ಯೋಪಾಸನೆ. ನಿಸರ್ಗ ಸುಂದರವಾಗಿಯೇ ಇರುತ್ತದೆ. ಬಣ್ಣಬಣ್ಣದ ಹೂಗಳು, ಮನಮೋಹಕ ಹಸಿರ ಹಚ್ಚಡ, ಸೊಬಗಿನ ಬೆಡಗಿನ ಪಕ್ಷಿಗಳು, ಪಾತರಗಿತ್ತಿಗಳೇ ಮುಂತಾದ ಪ್ರಕೃತಿ ಸೌಂದರ್ಯಕ್ಕೆ ನಾವೆಲ್ಲ ಮನಸೋಲುತ್ತೇವೆ. ಅವುಗಳ ಲಾಲನೆ ಪಾಲನೆ ಹಾಗೂ ಸಂರಕ್ಷಣೆ ನಮ್ಮ ಮನಸ್ಸಿಗೆ ಮುದ ನೀಡುತ್ತದೆ. ಮೂರನೇ ಸ್ತಂಭ ನಮ್ಮದೇ ಉಳಿವು. ಅಂದರೆ ನಮ್ಮ ಬದುಕಿನ ದಿನನಿತ್ಯದ ಅಗತ್ಯಗಳಾದ ಆಹಾರ ಮತ್ತಿತರ ಬಳಕೆ ಸಾಮಗ್ರಿಗಳಿಗೆ ಬೇಕಾದ ಕಚ್ಚಾ ವಸ್ತು. ಈ ಸಂಪತ್ತನ್ನು ಸರಿಯಾಗಿ ನಿರ್ವಹಿಸದಿದ್ದರೆ ಅವು ಹೆಚ್ಚು ಕಾಲ ಉಳಿಯಲಾರವು. ನಾಲ್ಕನೆಯದು ನಮ್ಮ ವೈಜ್ಞಾನಿಕ ಸ್ತಂಭ. ಈ ನಿಸರ್ಗ ಸಂಪತ್ತಿನ ಆಧಾರವಿಲ್ಲದಿದ್ದರೆ ನಮ್ಮ ಯಾವ ವಿಜ್ಞಾನ ತಂತ್ರಜ್ಞಾನ ಸಾಧನೆಗಳೂ ಕೈಗೂಡುತ್ತಿರಲಿಲ್ಲ. ಮನುಷ್ಯನ ಅಭಿವೃದ್ಧಿಗೆಂದು ನಾವು ಕೈಗೊಂಡ ಎಲ್ಲ ಬಗೆಯ ಜ್ಞಾನಾರ್ಜನೆ, ಪ್ರಯೋಗ, ಪರೀಕ್ಷೆಗಳಿಗೆಲ್ಲ ನಿಸರ್ಗವೇ ಮೂಲಾಧಾರ. ಈಗಂತೂ ಪ್ರಾಣಿ ಮತ್ತು ಸಸ್ಯಗಳೆಂದರೆ ತಳಿಭಂಡಾರವೆಂದೇ ಪರಿಗಣಿಸಲಾಗುತ್ತಿದೆ. ಪಶುಸಂಗೋಪನೆ, ಮೀನುಗಾರಿಕೆ, ಕೋಳಿಸಾಕಣೆಯೇ ಮುಂತಾದ ಚಟುವಟಿಕೆಗಳಿಗೆ ಅಗತ್ಯವಾದ ತಳಿ ಸಂವರ್ಧನೆ, ಮೇವು ತಯಾರಿಕೆಯ ವೈಜ್ಞಾನಿಕ ಸಂಶೋಧನೆಗಳು ನಿಸರ್ಗ ಸಂಪತ್ತಿಲ್ಲದಿದ್ದರೆ

ಸಾಧ್ಯವಾಗುತ್ತಿರಲಿಲ್ಲ. ವನ್ಯಲೋಕದ ಸಸ್ಯಸ್ತೋಮ ಹಾಗೂ ಪ್ರಾಣಿಸ್ತೋಮಗಳ ಸಂರಕ್ಷಣೆಯೇ ಈ ಪ್ರಗತಿಯ ಮೂಲಮಂತ್ರವಾಗಿದೆ.

## ಪ್ರಕೃತಿ ಮಾತೆಗೆ ಎಲ್ಲರೂ ಒಂದೇ

ವಿಜ್ಞಾನ ತಂತ್ರಜ್ಞಾನ ಪ್ರಗತಿಯ ನಾಗಾಲೋಟದಲ್ಲಿ ನಾವು ಕ್ರಮೇಣ ವನ್ಯಜೀವಿಗಳ ಅವಸಾನಕ್ಕೆ ದಾರಿ ಮಾಡಿಕೊಡುತ್ತಿದ್ದರೆ ನಮ್ಮ ಬದುಕೇ ಒಂದಲ್ಲ ಒಂದು ದಿನ ವಿನಾಶದ ಪ್ರಪಾತದ ಅಂಚಿಗೆ ಬಂದು ನಿಲ್ಲುತ್ತದೆ.

'ಮರೆಯಾಗುತ್ತಿರುವ ವಂಶಗಳು' *(Vanishing Species)* ಎಂಬ ಹೆಸರಿನ ಟೈಮ್ – ಲೈಫ್ ಗ್ರಂಥಕ್ಕೆ ಮುನ್ನುಡಿ ಬರೆಯುವಾಗ ರೊಮೇನ್ ಗ್ರೇ ಒಂದು ಗಹನವಾದ ವಿಚಾರವನ್ನು ಪ್ರಸ್ತಾಪಿಸಿದ್ದಾರೆ: "ಒಂದು ಪುಟ್ಟ ಡ್ಯಾಫೊಡಿಲ್ ಹೂವಿಗಿಂತ ಮಾನವನನ್ನೇ ನಿಸರ್ಗ ಹೆಚ್ಚು ಪ್ರೀತಿ ಮಾಡುತ್ತದೆ ಎಂಬುದಕ್ಕೆ ಯಾವ ಆಧಾರಗಳೂ ಇಲ್ಲ. ನಮಗಿಂತ ಮೊದಲು ಅಳಿದು ಹೋದ ಎಷ್ಟೋ ಸಹಸ್ರ ಜೀವ ಸಂಕುಲಗಳ ಹಾಗೆ ನಾವೂ ಒಂದು ದಿನ ಹಠಾತ್ತಾಗಿ, ಆಮೂಲಾಗ್ರವಾಗಿ ನಾಶವಾಗಬಹುದು......ಪ್ರಕೃತಿ ಮಾತೆಗೆ ಎಲ್ಲ ಮಕ್ಕಳೂ ಒಂದೇ ...... ನಿಸರ್ಗದ ಸಮತೋಲ ತಪ್ಪುತ್ತಿದೆಯೆಂದರೆ, ಅದನ್ನು ಮತ್ತೆ ಹತೋಟಿಗೆ ತರಲು ಎಷ್ಟೇ ವೆಚ್ಚವಾದರೂ ನಿಸರ್ಗ ಒಂದಲ್ಲ ಒಂದು ಮಾರ್ಗವನ್ನು ಹುಡುಕಿಕೊಳ್ಳುತ್ತದೆ. ನಮ್ಮಿಂದ ಏಟು ತಿಂದ ನಿಸರ್ಗ ಅಷ್ಟೇ ತೀವ್ರವಾಗಿ ಮರು ಏಟು ಕೊಡಬಹುದು. ಕ್ಷುದ್ರ ಹೂಗಿಡಕ್ಕಿಂತ ಮೈಕೆಲೆಂಜೆಲೋ, ಅಥವಾ ಶೇಕ್ಸ್‌ಪಿಯರ್ ಅಥವಾ ಮೊಸಾರ್ಟ್ ದೊಡ್ಡವರೆಂಬುದನ್ನು ನಿಸರ್ಗ ಪರಿಗಣಿಸಲಿಕ್ಕಿಲ್ಲ. ಜೀವ ಎಂದರೇನೆಂಬುದು ಎಳ್ಳಷ್ಟೂ ಗೊತ್ತಿಲ್ಲದ ನಾವು ಆ ಮಹಾಶಕ್ತಿಯ ಉದ್ದೇಶ ಅರಿಯದೇ ಹಸ್ತಕ್ಷೇಪ ಮಾಡುತ್ತಿದ್ದೇವೆ. ನಮಗೆ ಗೊತ್ತಿರುವ ಒಂದೇ ಒಂದು ಸಂಗತಿಯೆಂದರೆ – ಜೀವ ಸಂಕುಲಗಳ ಮಧ್ಯೆ ನಿಸರ್ಗ ಪಕ್ಷಪಾತಿಯಲ್ಲ."



# ಅಪರೂಪದ, ಅಪಾಯಕ್ಕೊಳಗಾದ ಜೀವಿಗಳು

ವಿನಾಶದ ಅಂಚಿಗೆ ಬಂದ ಪ್ರಾಣಿಗಳು ಯಾವುವು ಎಂಬುದನ್ನು ಈ ಮೊದಲೇ ಹೇಳಲಾಗಿದೆ. ಯಾವ ಪ್ರಾಣಿಯ ಸಂಖ್ಯೆ ಕ್ರಮೇಣ ಕ್ಷೀಣಿಸುತ್ತ ಬಂದು, ಸಂದಿಗ್ಧವೆನ್ನಬಹುದಾದಷ್ಟು ಕೆಳಮಟ್ಟಕ್ಕಿಳಿದಿದೆಯೋ, ಮತ್ತು ಆ ಸಂಕುಲವೇ ನಿರ್ವಂಶವಾಗುವಷ್ಟರ ಮಟ್ಟಿಗೆ ಯಾವ ಪ್ರಾಣಿಯ ವಾಸಕ್ಷೇತ್ರ ಧ್ವಂಸವಾಗುತ್ತ ಸಂಕುಚಿತವಾಗಿದೆಯೋ ಅಂಥ ಪ್ರಾಣಿ ಪೀಳಿಗೆ 'ಅಪಾಯದ ಅಂಚಿನಲ್ಲಿದೆ' ಎನ್ನುತ್ತೇವೆ. ನಿಸರ್ಗ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆಯ ಅಂತಾರಾಷ್ಟ್ರೀಯ ಒಕ್ಕೂಟ (ಐಯುಸಿಎನ್) ಇಂಥ ಅಪಾಯದ ಅಂಚಿನಲ್ಲಿರುವ ಪ್ರಾಣಿಗಳ *'ಕೆಂಪು ದಸ್ತಾವೇಜು ಪುಸ್ತಕ' (Red Data Book)* ವನ್ನು ಸಿದ್ಧಪಡಿಸಿದೆ.

ಭಾರತದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯಿದೆ *1972*ರಲ್ಲಿ ನಮ್ಮಲ್ಲಿರುವ ಪ್ರಾಣಿ ಸಂಕುಲಗಳನ್ನು ಅವುಗಳ ಸಂರಕ್ಷಣಾ ಸ್ಥಿತಿಗತಿಗೆ ತಕ್ಕಂತೆ ವಿಂಗಡಿಸಿ ನಾಲ್ಕು ತಪಶೀಲುಗಳನ್ನು ಮಾಡಿದೆ. ಸಂರಕ್ಷಣಾ ಸ್ಥಿತಿಗತಿಯಲ್ಲಿ ಮಾರ್ಪಾಡಾದ ಹಾಗೆಯೇ ಆಗಾಗ ಈ ತಪಶೀಲುಗಳ ಮರುಪರಿಶೀಲನೆ ಮಾಡಲಾಗುತ್ತಿದೆ. ಇಂದಿನ ತಪಶೀಲಿನ ಪ್ರಕಾರ ಭಾರತದಲ್ಲಿ 'ಅಪಾಯದ ಅಂಚಿಗೆ' ಬಂದ ಪ್ರಾಣಿಗಳಲ್ಲಿ 81 ಸ್ತನಿ ವಂಶಗಳೂ, 38 ಪಕ್ಷಿಗಳೂ 18 ಉಭಯವಾಸಿ ಮತ್ತು ಉರಗಗಳೂ ಸೇರಿವೆ. ಸಂರಕ್ಷಣಾ ಯತ್ನಗಳ ಫಲವಾಗಿ ಇಂದು ಹುಲಿ, ಘೇಂಡಾ ಮತ್ತು ಮೊಸಳೆಗಳ ಸ್ಥಿತಿಗತಿ ಊರ್ಜಿತಕ್ಕೆ ಬಂದಿದೆ. 'ಜೆರ್ಡನ್ನನ ಓಟದ ಕುದುರೆ' ಎಂಬ ಅಪರೂಪದ ಪಕ್ಷಿವಂಶ ಅಳಿದೇ ಹೋಗಿದೆಯೆಂದು ನಂಬಲಾಗಿದ್ದು ಇದೀಗ ಮತ್ತೆ ಪತ್ತೆಯಾಗಿದೆ. ಕೆಲವು ಸೀಮಿತ ವಾಸಕ್ಷೇತ್ರದಲ್ಲಿ ಚಿಕ್ಕ ಗುಂಪುಗಳಲ್ಲಾದರೂ ಅವು ಬದುಕುಳಿದಿವೆ ಎಂಬುದು ಗೊತ್ತಾಗಿದೆ.

'ಅಪಾಯದ ಅಂಚಿಗೆ' ಬಂದ ಪ್ರಾಣಿಗಳ ಸಂರಕ್ಷಣಾ ಕ್ರಮ ಕೈಗೊಳ್ಳಲೆಂದು ಜನಜಾಗೃತಿ ಮೂಡಿಸುವ ಮುಂಚೆ, ಅಂಥ ಪ್ರಾಣಿಗಳ ಜೀವನ ಕ್ರಮ ಹಾಗೂ ನೆಲೆ ಪರಿಚಯ ನಮಗಿರಬೇಕಾದುದು ಅತ್ಯಾವಶ್ಯಕ. ಅಂಥ ಕೆಲವು ಅಪರೂಪದ, ಸಂಕಟಕ್ಕೊಳಗಾದ ಹಾಗೂ ಅಪಾಯದ ಅಂಚಿಗೆ ಬಂದ ಭಾರತೀಯ ಪ್ರಾಣಿಗಳ ಕುರಿತು ಈ ಅಧ್ಯಾಯದಲ್ಲಿ ಮಾಹಿತಿಗಳನ್ನು ಕೊಡಲಾಗುತ್ತಿದೆ.

## ಸ್ತನಿಗಳು

ಪ್ರಾಣಿಲೋಕವನ್ನು ಮುಖ್ಯವಾಗಿ ಎರಡು ಗುಂಪುಗಳಾಗಿ ವಿಂಗಡಿಸಲಾಗಿದೆ: ಬೆನ್ನು ಮೂಳೆಯಿರುವ 'ಕಶೇರುಕಗಳು' ಮತ್ತು ಬೆನ್ನು ಮೂಳೆಯಿಲ್ಲದ 'ಅಕಶೇರುಕ'ಗಳು. ಮೀನುಗಳು, ಉಭಯವಾಸಿ (ದ್ವಿಚರಿ)ಗಳು, ಉರಗ (ಸರೀಸೃಪ)ಗಳು, ಪಕ್ಷಿಗಳು ಮತ್ತು ಸ್ತನಿಗಳು ಕಶೇರುಕ ಗುಂಪಿಗೆ ಸೇರುತ್ತವೆ. ಕೀಟಗಳು, ಹುಳಗಳು, ಬಸವನಹುಳು, ಆಕ್ಟೋಪಸ್, ನಕ್ಷತ್ರಮೀನು ಇತ್ಯಾದಿಗಳೆಲ್ಲ ಅಕಶೇರುಕ ಗುಂಪಿಗೆ ಸೇರುತ್ತವೆ. ಇವಕ್ಕೆ ಬೆನ್ನುಮೂಳೆ ಇಲ್ಲ.

ಸುಮಾರು 48 ಕೋಟಿ ವರ್ಷಗಳ ಹಿಂದೆ ಅವತರಿಸಿದ ಕಶೇರುಕಗಳನ್ನು ವಿಕಾಸ ಮಾರ್ಗದಲ್ಲಿ ಮುಂದುವರೆದ ಜೀವಿಗಳೆಂದು ಪರಿಗಣಿಸಲಾಗಿದೆ. ಅವುಗಳಲ್ಲೂ 20 ಕೋಟಿ ವರ್ಷಗಳೀಚೆಗೆ ಅವತರಿಸಿದ ಸ್ತನಿಗಳು ಅತ್ಯಂತ ಪ್ರಬಲವಾಗಿ ವಿಕಾಸಗೊಂಡಿವೆ. ಸ್ತನಿಗಳಿಗೆ ಎರಡು ಮುಖ್ಯ ಲಕ್ಷಣಗಳಿವೆ: ಮರಿಗಳಿಗೆ ಹಾಲೂಡಿಸಲೆಂದು ಸ್ತನಗಳು ಮತ್ತು ಮೈಮೇಲೆ ರೋಮಗಳಿವೆ. ಪ್ರಪಂಚದಲ್ಲಿ ಜೀವನಯೋಗ್ಯವಾದ ಎಲ್ಲಾ ಬಗೆಯ ಪರಿಸರಕ್ಕೂ ಹೊಂದಿಕೊಂಡು ಬದುಕಲು ಸಾಧ್ಯವಾಗುವಂತೆ ಸ್ತನಿಗಳ ಶರೀರ ಹಾಗೂ ನರಮಂಡಲ ಸೂಕ್ತವಾಗಿ ವಿಕಾಸಗೊಂಡಿದೆ. ಅದಕ್ಕೇ ಇಂದು ಭೂಖಂಡದ ಬಹುತೇಕ ಎಲ್ಲ ಬಗೆಯ ಪರಿಸರದಲ್ಲೂ ಅವು ನೆಲೆಯೂರಿವೆ. ಪ್ರಾಣಿಪ್ರಪಂಚದಲ್ಲಿ ಮನುಷ್ಯನೂ ಸೇರಿದಂತೆ ಈ ಸ್ತನಿಗಳೇ ಅತ್ಯಂತ ಯಶಸ್ವೀ ಸ್ಥಾನದಲ್ಲಿವೆ. ಅವುಗಳ ಗುಂಪು ಅಷ್ಟೇನೂ ದೊಡ್ಡದಾಗಿಲ್ಲ. (ಕೀಟಗಳಲ್ಲಿ 8,00,000 ವಂಶಗಳಿವೆ; ಮೀನುಗಳಲ್ಲಿ 21,700 ವಂಶಗಳೂ, ಪಕ್ಷಿಗಳಲ್ಲಿ 8,600 ವಂಶಗಳೂ ಇದ್ದರೆ ಸ್ತನಿಗಳಲ್ಲಿ ಕೇವಲ 4,000 ವಂಶಗಳಿವೆ). ಆದರೂ ಅವುಗಳ ಗಾತ್ರ, ಆಕಾರ, ರೂಪ ಹಾಗೂ ಕ್ರಿಯೆಯಲ್ಲಿ ಅಗಾಧ ಭಿನ್ನತೆಯಿದೆ. ಒಂದು ಕಡೆ ನೂರು ಟನ್‌ಗಳಿಗಿಂತ ಭಾರವಾದ ತಿಮಿಂಗಿಲುಗಳಿವೆ. ಇನ್ನೊಂದು ತುದಿಗೆ (ಇತ್ತೀಚೆಗೆ ಪತ್ತೆಯಾದ) ಕೇವಲ ಒಂದೂವರೆ ಗ್ರಾಮ್ ತೂಕದ ಕಿಟ್ಟೀಸ್ ಹಂದಿಮೂತಿ ಬಾವಲಿಗಳಿವೆ.

ಪ್ರಪಂಚದ ಇತರೆಲ್ಲ ಪ್ರಾಣಿಗಳಿಗಿಂತ ಸ್ತನಿಗಳೇ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಮನುಷ್ಯನ ಪ್ರಭಾವಕ್ಕೊಳಗಾಗಿವೆ. ಭಾರೀ ಸಂಖ್ಯೆಯ ಸ್ತನಿಗಳನ್ನು ನಾವು ಆಹಾರಕ್ಕಾಗಿ, ಬಟ್ಟೆಗಾಗಿ, ಕೂಲಿ ಕೆಲಸಕ್ಕಾಗಿ ಹಾಗೂ ಮನರಂಜನೆಗಾಗಿ

ಪಳಗಿಸಿದ್ದೇವೆ. ವೈದ್ಯಕೀಯ ಸಂಶೋಧನೆಗೆಂದು ಪ್ರತಿವರ್ಷವೂ ಕೋಟ್ಯಂತರ ಸ್ತನಿಗಳನ್ನು ಬಳಸಿಕೊಳ್ಳುತ್ತಿದ್ದೇವೆ. ಬಹಳಷ್ಟು ಸ್ತನಿವಂಶಗಳ ವಾಸಕ್ಷೇತ್ರ ನಾಶಕ್ಕೆ ಕಾರಣರಾಗಿದ್ದೇವೆ. ಅವುಗಳ ಸಂಖ್ಯೆ ಕ್ಷೀಣಿಸುತ್ತ ಅಪಾಯದ ಅಂಚಿಗೆ ಬರಲು ಕಾರಣರಾಗಿದ್ದೇವೆ.

## ಪ್ರಧಾನ ವರ್ಗ
*(ಪ್ರೈಮೇಟೀಸ್)*

ವಾನರಗಳಿಗೆ, ಮಂಗಗಳಿಗೆ ಹಾಗೂ ಮನುಷ್ಯನಿಗೆ **ಪ್ರೈಮೇಟೀಸ್** ಎನ್ನುತ್ತಾರೆ. ಇತರ ಪ್ರಾಣಿಗಳಿಗೆ ಹೋಲಿಸಿದರೆ ಇವು ಪ್ರಥಮ ಸ್ಥಾನದಲ್ಲಿವೆ, ಪ್ರಧಾನವಾಗಿವೆ ಎಂಬರ್ಥದಲ್ಲಿ ಕಾರ್ಲ್ ಲಿನ್ನೀಯಸ್ (1707-78) ಎಂಬ ನಿಸರ್ಗ ವಿಜ್ಞಾನಿ ಮೊಟ್ಟಮೊದಲು ಇವುಗಳನ್ನು ಸ್ತನಿವಂಶದಲ್ಲಿ ಅತ್ಯಂತ ಎತ್ತರದ ತರಗತಿಗೆ ಸೇರಿಸಿದ್ದಾನೆ. ಶರೀರದ ರೂಪ, ಗಾತ್ರಗಳನ್ನು ಆಧರಿಸಿ ಹೀಗೆ ವಿಂಗಡನೆ ಮಾಡಿದ್ದಲ್ಲ. ಶರೀರವೊಂದನ್ನೇ ಪರಿಗಣಿಸಿದರೆ ಪ್ರಪಂಚದ ಇನ್ನೂ ಎಷ್ಟೋ ಕೆಳಹಂತದ ಜೀವಿಗಳು (ಉದಾ: ಕೀಟಗಳು) ವಿವಿಧ ಬಗೆಯ ವಾಸಕ್ಷೇತ್ರಗಳಲ್ಲಿ ಬದುಕಿ ಬಾಳುವ ಅರ್ಹತೆ ಪಡೆದಿರಬಹುದು. ಪ್ರೈಮೇಟೀಸ್‌ಗಳ ಪ್ರಾಧಾನ್ಯ ಅವುಗಳ ಮಿದುಳಿನ ಗಾತ್ರ ಹಾಗೂ ಅದಕ್ಕೆ ಅನುಗುಣವಾದ ಬುದ್ಧಿವಂತಿಕೆಯಲ್ಲಿದೆ.

ನಮಗೆ ಗೊತ್ತಿರುವಂತೆ ಪ್ರಪಂಚದ ಮೊಟ್ಟಮೊದಲ ವಾನರ ಸುಮಾರು ಏಳು ಕೋಟಿ ವರ್ಷಗಳ ಹಿಂದೆ ಅವತರಿಸಿದ್ದು ಅದೊಂದು ಪುಟ್ಟ, ವೃಕ್ಷವಾಸಿ ಪ್ರಾಣಿಯಾಗಿತ್ತು. ಇಂದಿನ ಉದ್ದಮೂತಿಯ ವೃಕ್ಷವಾಸಿ ಶ್ರೂ ಇಲಿಗಳಂಥ ಆದಿಕಾಲದ ಇರುವೆ ಭಕ್ಷಕ ಸ್ತನಿಗಳೇ ವಿಕಾಸವಾಗಿ ವಾನರಗಳಾಗಿವೆ. ಈ ಏಳು ಕೋಟಿ ವರ್ಷಗಳಲ್ಲಿ ಬಹುಪಾಲು ಪ್ರೈಮೇಟೀಸ್‌ಗಳು ಮರಗಳ ಮೇಲೆ ವಾಸಿಸುತ್ತಲೇ ವಿಕಾಸಪಥವನ್ನು ಕ್ರಮಿಸಿವೆ. ಕೆಲವೇ ಕೆಲವು ವಾನರಗಳು ಹಾಗೂ ಮನುಷ್ಯ ಪ್ರಾಣಿ ಮಾತ್ರ ಈ ಮಾರ್ಗ ಬಿಟ್ಟು ಕೆಳಗಿಳಿದು ಬಂದಿವೆ.

ಇತರ ಸ್ತನಿಗಳಿಗೆ ಹೋಲಿಸಿದರೆ, ಪ್ರೈಮೇಟೀಸ್‌ಗಳ ಮಿದುಳು ಭಾರೀ ವಿಕಾಸಗೊಂಡಿದೆ. ಪ್ರಾರಂಭದಲ್ಲಿ ಮರದ ಮೇಲೆ ಜೀವಿಸುತ್ತಿದ್ದ ಪ್ರೈಮೇಟೀಸ್‌ಗಳಿಗೆ ಕಪಿಮುಷ್ಟಿಯ ಅಗತ್ಯವಿತ್ತು; ಸ್ನಾಯುಗಳ ಸಹವರ್ತನೆಯ ಅಗತ್ಯವಿತ್ತು; ಚುರುಕು ಪ್ರತಿಕ್ರಿಯೆ, ಅವಿರತ ಶೋಧಬುದ್ಧಿಯನ್ನೂ ಅವು ಬೆಳೆಸಿಕೊಳ್ಳಬೇಕಿತ್ತು. ದೇಹ ಅಷ್ಟಾಗಿ ಸಶಕ್ತವಾಗಿಲ್ಲದ ಕಾರಣ, ತನಗಿಂತ ದಢೂತಿ ಪ್ರಾಣಿಗಳೊಂದಿಗೆ ಪೈಪೋಟಿ ಮಾಡಲು ಬುದ್ಧಿಯನ್ನೇ ಬಳಸಿಕೊಳ್ಳಬೇಕಿತ್ತು.

ಪ್ರೈಮೇಟೀಸ್‌ಗಳಲ್ಲಿ ಎರಡು ಪ್ರಮುಖ ಉಪತರಗತಿಗಳಿವೆ *(Sub orders):* ಒಂದರಲ್ಲಿ ಮನುಷ್ಯ, ವಾನರ ಮತ್ತು ಕೋತಿಗಳಿದ್ದರೆ, ಇನ್ನೊಂದರಲ್ಲಿ ಕಾಡುಪಾಪ (ಲೀಮರ್) ಮತ್ತು ಅದರ ದಾಯಾದಿಗಳಿವೆ. ಭಾರತದಲ್ಲಿ ಹೂಲಾಕ್ ಗಿಬ್ಬನ್ ಎಂಬ ಒಂದೇ ಒಂದು ವಾನರ ಜಾತಿ ಇದೆ. ಕೋತಿಗಳಲ್ಲಿ ಸಿಂಗಳೀಕ ಮತ್ತು ಲಂಗೂರಗಳ ಅನೇಕ ಕುಲಗಳಿವೆ. ಲೀಮರ್‌ಗಳಲ್ಲಿ ಲೋರೀಸ್ ಎಂಬ ಕಾಡುಪಾಪ

ಮಾತ್ರ ನಮ್ಮಲ್ಲಿದೆ. ನಮ್ಮ ದೇಶದಲ್ಲಿ ಅಪಾಯದ ಅಂಚಿನಲ್ಲಿರುವ ಪ್ರೈಮೇಟೀಸ್‌ಗಳ ಸಂಕ್ಷಿಪ್ತ ವಿವರಣೆಗಳನ್ನು ಮುಂದೆ ಓದಬಹುದು.

**ಸಿಂಹಬಾಲದ ಸಿಂಗಳೀಕ**

*ಮಕಾಕಾ ಸೈಲೆನಸ್ (ಲಿನೀಯಸ್)*

ಕೇರಳದ ಸೈಲೆಂಟ್ ವ್ಯಾಲಿ ಜಲವಿದ್ಯುತ್ ಯೋಜನೆ ಕುರಿತಂತೆ ವಿವಾದವೆದ್ದಾಗ ಈ ಸಿಂಹಬಾಲದ ಸಿಂಗಳೀಕಗಳು (ವರ್ಣಚಿತ್ರ – 3) ಅಪಾಯದ ಅಂಚಿನಲ್ಲಿರುವ ಪ್ರೈಮೇಟೀಸ್‌ಗಳಲ್ಲಿ ಅತ್ಯಂತ ಪ್ರಮುಖವೆಂಬ ಸಂಗತಿ ಬೆಳಕಿಗೆ ಬಂತು. ಆದರೆ ಈ ಯೋಜನೆಯನ್ನು ಕೈಬಿಟ್ಟಿದ್ದೇ ಭಾರತದ ವನ್ಯಸಂರಕ್ಷಣಾ ಚಳವಳಿಯ ಯಶಸ್ವೀ ಗಾಥೆಯಾಗುವುದರೊಂದಿಗೆ ಸಿಂಗಳೀಕಗಳೂ ಸದ್ಯಕ್ಕೆ ಅಪಾಯದಿಂದ ಪಾರಾಗುವ ಲಕ್ಷಣಗಳು ಕಾಣುತ್ತಿವೆ.

ಕಪ್ಪು ಕರಿ ಕೂದಲು, ಮುಖದ ಸುತ್ತ ಬಿಳಿರೋಮದ ಪ್ರಭಾವಳಿ ಹಾಗೂ ಬಾಲದ ತುದಿಯಲ್ಲಿ ಗೊಂಡೆ (ಇದರಿಂದಾಗಿಯೇ 'ಸಿಂಹಬಾಲ'ವೆಂಬ ಬಿರುದು ಇದಕ್ಕೆ ಬಂದಿದ್ದು) ಇವೆಲ್ಲ ಲಕ್ಷಣಗಳಿಂದ ಈ ಸಿಂಗಳೀಕ ಆಫ್ರಿಕದ ಬಬೂನ್ ಎಂಬ ದೊಡ್ಡ ಜಾತಿಯ ಕೋತಿಯನ್ನು ಹೋಲುತ್ತದೆ. ದಟ್ಟ, ಸದಾ ಹಸಿರಿನ ಉಷ್ಣವಲಯದ ಕಾಡುಗಳಲ್ಲಿ ಮಾತ್ರ ವಾಸಿಸುವ ಇದು ಪಶ್ಚಿಮ ಘಟ್ಟಗಳ ನೀಲಗಿರಿ, ಏಲಕ್ಕಿ ಬೆಟ್ಟ, ಅಣ್ಣಾಮಲೈ, ಸೈಲೆಂಟ್ ವ್ಯಾಲಿ ಮತ್ತು ಪೆರಿಯಾರ್ ಅಭಯಾರಣ್ಯದಲ್ಲಿ ಮಾತ್ರ ನೋಡಸಿಗುತ್ತದೆ.

ಉಷ್ಣವಲಯದ ಕಾಡುಗಳಲ್ಲಿ ಹಸನಾಗಿ ಬಾಳಬಲ್ಲ ಸಿಂಗಳೀಕ ಮಹಾ ಗಟ್ಟಿಗ. ವೃಥಕಾಯದ, ಮಧ್ಯಮಗಾತ್ರದ ಈ ಮಂಗಕ್ಕೆ ದಪ್ಪನ್ನ ಗಿಡ್ಡ ಕೈಕಾಲುಗಳಿದ್ದು, ಉದ್ದನ್ನ ಆದರೆ ಉರುಟಾದ ಮೂಗು ಮತ್ತು ಮುಂಚಾಚಿದ ಗಟ್ಟಿ ಹುಬ್ಬುಗಳಿವೆ. ಗಪಗಪ ತಿಂದ ಆಹಾರವನ್ನು ಶೇಖರಿಸಿಟ್ಟುಕೊಂಡು ನಿಧಾನವಾಗಿ ಅಗಿದು ನುಂಗಲು ಅನುಕೂಲವಾಗುವಂತೆ ದವಡೆಯ ಪಕ್ಕದಲ್ಲಿ ಚೀಲವಾಗಬಲ್ಲ ಜೋಲು ಕೆನ್ನೆಯಿದೆ.

**ಬಂಗಾರದ ಲಂಗೂರ**

*ಪ್ರೆಸ್‌ಬೈಟಿಸ್ ಗೀಈ ಖಜೂರಿಯಾ*

ಕಪ್ಪು ಮೂತಿಯ, ಬಂಗಾರದ ಇಲ್ಲವೆ ಕಡು ಕೆನೆಬಣ್ಣದ ಕೂದಲುಗಳುಳ್ಳ ಗೋಲ್ಡನ್ ಲಂಗೂರ್‌ಗೆ (ವರ್ಣಚಿತ್ರ – 2) ತುಂಬ ಉದ್ದದ ಬಾಲವಿದೆ. ಹಿಮಾಲಯದ ಪಾದಭೂಮಿಯಲ್ಲಿ, ಭಾರತ ಮತ್ತು ಭೂತಾನ್ ಮೂಲಕ ಸಾಗಿ ಬರುವ ಸಂಕೋಶ್ ಮತ್ತು ಮಾನಸ ನದಿಗಳ ಗುಂಟ ಅಸ್ಸಾಂ – ಭೂತಾನ್ ಗಡಿಯ ಸೀಮಿತ ಪ್ರದೇಶದಲ್ಲಿ ಈ ಲಂಗೂರಗಳು ವಾಸಿಸುತ್ತವೆ. ತನ್ನ ಉದ್ದನ್ನ ಬಾಲವನ್ನು ಸಮತೋಲಕ್ಕಾಗಿ ಬಳಸಿಕೊಂಡು ಕೊಂಬೆಯಿಂದ ಕೊಂಬೆಗೆ ಜಿಗಿಯುವ ಇದು ತನ್ನ ಜೀವಿತದ ಬಹುಭಾಗವನ್ನೆಲ್ಲ ಎತ್ತರದ ಮರಗಳ ಮೇಲೆಯೇ ಕಳೆಯುತ್ತದೆ.

## ನೀಲಗಿರಿ ಲಂಗೂರ್

*ಪ್ರೆಸ್‌ಬೈಟಿಸ್ ಜೋನಿ (ಫಿಶರ್)*

ಮಿರುಗುವ ಕಪ್ಪು ಬಣ್ಣದ ನೀಲಗಿರಿ ಲಂಗೂರ್‌ಗೆ ಇತರೆಲ್ಲ ಲಂಗೂರಗಳಂತೆ ಸಾಮಾನ್ಯ ಗಾತ್ರದ, ಆದರೆ ಹಳದಿ ಮಿಶ್ರಿತ ಕಂದುಬಣ್ಣದ ಶಿರವಿದೆ. ಇದಕ್ಕೂ ಸಹ ಉದ್ದವಾದ ಬಾಲವಿದ್ದು, ಹೆಸರಿಗೆ ತಕ್ಕಂತೆ ಇದು ಪಶ್ಚಿಮ ಘಟ್ಟಗಳ ನೀಲಗಿರಿ ಬೆಟ್ಟಗಳಲ್ಲಿ ವಾಸಿಸುತ್ತದೆ. ಕರ್ನಾಟಕದ ಕೊಡಗು ಜಿಲ್ಲೆಯಿಂದ ಹಿಡಿದು, ತಮಿಳುನಾಡಿನ ಪಳನಿ ಹಿಲ್ಸ್, ಅಣ್ಣಾಮಲೈ, ಬ್ರಹ್ಮಗಿರಿ ಹಾಗೂ ಕೇರಳದ ಏಲಕ್ಕಿ ಬೆಟ್ಟಗಳವರೆಗೂ ಇದರ ವಾಸಕ್ಷೇತ್ರವಿದೆ. ಕಾಯಿ, ಹಣ್ಣು, ಚಿಗುರೆಲೆ ಮತ್ತು ಕುಡಿ ಟಿಸಿಲುಗಳನ್ನು ತಿಂದು ಜೀವಿಸುವ ಈ ಲಂಗೂರಗಳು ಐದರಿಂದ ಹದಿನಾರು ಸದಸ್ಯರಿರುವ ಗುಂಪಿನಲ್ಲಿ ವಾಸಿಸುತ್ತವೆ. ಅನೇಕ ಬಾರಿ ಇವು ಕೃಷಿಭೂಮಿಗೂ ದಾಳಿ ಇಕ್ಕುವುದುಂಟು.



ಇತ್ತೀಚೆಗೆ ನೀಲಗಿರಿ ಲಂಗೂರಗಳ ಸಂಖ್ಯೆ ಕಡಿಮೆಯಾಗುತ್ತ ಬಂದಿದೆ. ಇದಕ್ಕೆ ಅನೇಕ ಕಾರಣಗಳುಂಟು: ಗುಡ್ಡದ ಇಳಿಜಾರಿನ ಕಣಿವೆಗಳ 'ಶೋಲಾ' ಅರಣ್ಯಗಳು ಕ್ಷೀಣಿಸುತ್ತಿವೆ; ಇದರ ಮಾಂಸದಲ್ಲೂ ಪೌರುಷ ವೃದ್ಧಿಯ ಗುಣಗಳಿವೆಯೆಂಬ ಮೂಢನಂಬಿಕೆಯಿಂದಾಗಿ, ಹಾಗೂ ಇದರ ತುಪ್ಪಳಕ್ಕಾಗಿ ಕಳ್ಳ ಬೇಟೆಯಾಡುವವರು ಹೆಚ್ಚುತ್ತಿದ್ದಾರೆ. ಈ ಎಲ್ಲ ಮಾನವ ಚಟುವಟಿಕೆಗಳೂ ಈ ಲಂಗೂರಗಳಿಗೆ ಮಾರಕವಾಗಿ ಪರಿಣಮಿಸುತ್ತಿವೆ.

**ಸಣಕಲು ಕಾಡುಪಾಪ**

*(ಸ್ಲೆಂಡರ್ ಲೋರಿಸ್)* *Loris tardigradus* (Linnaeus).

ಇದೊಂದು ಪುಟ್ಟ, ಸಣಕಲು ದೇಹದ, ಅತಿ ದೊಡ್ಡ ಕಣ್ಣುಗಳ, ಮುದ್ದಾದ ವಾನರ. ಉದ್ದುದ್ದ ಕೈಕಾಲುಗಳು, ಚೆನ್ನಾಗಿ ವಿಕಾಸಗೊಂಡ ತೋರುಬೆರಳು, ದೊಡ್ಡ ಕಿವಿ ಹಾಗೂ ಬಾಲವಿಲ್ಲದ ಪೃಷ್ಠ ಇವು ಇದರ ಪ್ರಮುಖ ಲಕ್ಷಣಗಳು. ದಟ್ಟ ಕಂದುಬಣ್ಣದ ಇದರ ತುಪ್ಪಳದ ಮೇಲೆ ರೋಮಗಳು ಅಲ್ಲಲ್ಲಿ ಬೆಳ್ಳಿಯಂತೆ ಮಿರುಗುತ್ತವೆ.



ಕಾಡುಪಾಪ ನಿಶಾಚರ. ರಾತ್ರಿ ವೇಳೆ ಇದು ಗಿಡಮರ, ಪೊದೆಗಳಲ್ಲಿ ಹಣ್ಣು ಹಂಪಲು ತಿನ್ನುತ್ತದೆ; ಕ್ರಿಮಿಕೀಟ, ಮರಗಪ್ಪೆ, ಹಲ್ಲಿ ಹಾಗೂ ಚಿಕ್ಕಪುಟ್ಟ ಪಕ್ಷಿಗಳನ್ನು ಬೇಟೆಯಾಡುತ್ತದೆ. ಹಗಲು ವೇಳೆ ತಲೆಯನ್ನು ಕೈಕಾಲುಗಳ ಮಧ್ಯೆ ಅವಿತಿಟ್ಟು ಇದು ಮರದ ಟೊಂಗೆಯನ್ನು ಒಂದು ಕೈಯಲ್ಲಿ ಬಿಗಿಯಾಗಿ ಹಿಡಿದು, ಇಡೀ ದೇಹವನ್ನು ಚಂಡಿನಂತೆ ಮುದುಡಿಸಿ ವಿರಮಿಸುತ್ತದೆ. ದಕ್ಷಿಣ ಭಾರತದ ಈ ವಿಚಿತ್ರ ವಾನರವನ್ನು ಕೇರಳ, ಕರ್ನಾಟಕ, ತಮಿಳುನಾಡು ಮತ್ತು ಆಂಧ್ರಪ್ರದೇಶದ ಕಾಡುಗಳಲ್ಲಿ ಕಾಣಬಹುದು. ಇದರಲ್ಲಿ ಕಣ್ಣುಗಳಿಗೆ ಸಂಬಂಧಿಸಿದ ಔಷಧೀಯ ಗುಣಗಳಿವೆಯೆಂಬ ನಂಬಿಕೆಯಿಂದಾಗಿ ಕೆಲವರು ಇದರ ಬೇಟೆಯಾಡುತ್ತಾರೆ. ವೈಜ್ಞಾನಿಕ ಸಂಶೋಧನೆಗಳಲ್ಲಿ ಇದನ್ನು ಪ್ರಯೋಗ ಪಶುವಿನಂತೆ ಬಳಸಿಕೊಳ್ಳಲೆಂದು ಬಲೆ ಹಾಕಿ ಹಿಡಿದೊಯ್ಯುತ್ತಾರೆ. ಒಟ್ಟಿನ ಮೇಲೆ ಮನುಷ್ಯನ ಹಸ್ತಕ್ಷೇಪದಿಂದಾಗಿ ಇವುಗಳ ಸಂತತಿಯೂ ಕ್ಷೀಣಿಸುತ್ತಿದೆ.

## ಮಂದಗತಿಯ ಕಾಡುಪಾಪ

*(ಸ್ಲೋ ಲೋರಿಸ್)* *Nycticebus Coucang* (Boddaert)

ಚೆನ್ನಾಗಿ ತಿಂದುಂಡು ಮೈಕೈ ತುಂಬಿಕೊಂಡ ಕಾಡುಪಾಪದಂತೆ ಕಾಣುವ ಇದು ಗಿಡ್ಡನ್ನ ಗುಂಡುಗುಂಡಾದ ದೇಹವುಳ್ಳ ಪ್ರಾಣಿ. ದುಂಡು ತಲೆ, ಗಿಡ್ಡ ಮುಖ, ಸುತ್ತ ದಟ್ಟ ಕಂದು ಉಂಗುರವಿರುವ ದೊಡ್ಡ ಗುಂಡನ್ನ ಕಣ್ಣುಗಳು ಇದಕ್ಕಿವೆ. ಪೃಷ್ಠದ ಮೇಲೆ ಪುಟ್ಟ, ಮೊಳಕೆಯಂಥ ಬಾಲವೂ ಇದೆ. ಮೈಮೇಲೆ ಮೃದುವಾದ ದಟ್ಟ ತುಪ್ಪಳವಿದ್ದು, ಬೆನ್ನ ಮೇಲೆ ಉದ್ದಕ್ಕೂ ಒಂದು ಕಂದುಪಟ್ಟೆ ಇದೆ. ಗಿಡಗಳ ಟೊಂಗೆಯನ್ನು ಗಟ್ಟಿ ಅಮುಕಿ ಹಿಡಿಯಲು ಅನುಕೂಲ ಆಗುವಂತೆ ಹೆಬ್ಬೆರಳು ಹಾಗೂ ಕಾಲ್ಬೆರಳು ಚೆನ್ನಾಗಿ ವಿಕಾಸಗೊಂಡಿವೆ.



ತೆಳ್ಳನ್ನ ಕಾಡುಪಾಪದ ಹಾಗೆ ಇದೂ ನಿಶಾಚರಿ. ಆಹಾರ ಮಾತ್ರ ಎಲೆ, ಎಳೆ ಚಿಗುರು, ಹಣ್ಣು ಮತ್ತು ಕ್ರಿಮಿ ಕೀಟಗಳಿಗಷ್ಟೇ ಸೀಮಿತವಾಗಿದೆ. ಇದು ಅಸ್ಸಾಂ ಸೇರಿದಂತೆ, ಈಶಾನ್ಯ ಭಾರತದ ಉಷ್ಣವಲಯದ ಕಾಡುಗಳಲ್ಲಿ ಕಾಣಸಿಗುತ್ತದೆ.

## ಬಿಳಿ ಹುಬ್ಬಿನ ಗಿಬ್ಬನ್

*(ಹೂಲಾಕ್ ಗಿಬ್ಬನ್)* *Hylobates hoolock* (Harlan)

ಭಾರತದಲ್ಲಿ ವಾಸಿಸುವ ಏಕೈಕ ನರವಾನರ (ಏಪ್) ಇದು. ನರವಾನರಗಳಲ್ಲಿ ಅತ್ಯುತ್ತಮ ದೊಂಬರಾಟ ಮಾಡುವುದೂ ಇದೇ. ಕಪ್ಪು ರೋಮಗಳುಳ್ಳ ಶರೀರ, ಉರುಟು ಮುಖ, ಹುಬ್ಬಿರುವಲ್ಲಿ ಎದ್ದು ಕಾಣುವ ಬಿಳಿ ಪಟ್ಟೆ, ಉದ್ದ ತೋಳುಗಳು ಹಾಗೂ ಬಾಲವಿಲ್ಲದ ಪೃಷ್ಠ ಇವು ಇದರ ಪ್ರಮುಖ ಲಕ್ಷಣಗಳು. ಭುಜದ ಕೀಲುಗಳು ಸಲೀಸಾಗಿ ಚಲಿಸುವುದರಿಂದ ತೋಳುಗಳ ಮುಕ್ತ ಚಲನೆಗೆ ಸಹಾಯಕವಾಗಿದೆ. ಉದ್ದ ಬಾಹುಗಳು ಗಿಡದ ಟೊಂಗೆಯನ್ನು ಕೊಂಡಿಯಂತೆ ಹಿಡಿಯುತ್ತವೆ. ಒಂದು ಕೈಯಿಂದ ಟೊಂಗೆ ಹಿಡಿದು ಇಡೀ ದೇಹವನ್ನು ಜೋಲಿ ಹೊಡೆಸುತ್ತಲೇ, ಮತ್ತೊಂದು ಕೈಯಿಂದ ದೂರದ ಟೊಂಗೆಯನ್ನು ಬೀಸಿ ಹಿಡಿದು



ಸಾಗುವ ಇದು ಕೆಲವೊಮ್ಮೆ ಒಂದೇ ಜೋಲಿಯಲ್ಲಿ ಮೂರು ಮೀಟರ್ ದೂರ ಸಾಗುವುದುಂಟು. ಹೀಗೆ ಅದು ಅರಣ್ಯದ ಮೇಲ್ಛಾವಣಿಯನ್ನು ಅಕ್ಷರಶಃ ಸವರುತ್ತ ಅದ್ಭುತ ವೇಗದಲ್ಲಿ ಚಲಿಸಬಲ್ಲದು. ಜಿಗಿಯಬೇಕಿದ್ದಾಗ ಇದು ಎರಡೂ ಕೈಗಳನ್ನು ಮೇಲಕ್ಕೆತ್ತಿ ಟೊಂಗೆಗಿಂತ ಎತ್ತರಕ್ಕೆ ಚಿಮ್ಮಿ ಮುಂದಿನ ಟೊಂಗೆಯನ್ನು ಹಿಡಿಯಲು ಸಿದ್ಧವಾಗಿ ನೆಗೆಯುತ್ತದೆ.

ಸೆಟೆದು ನಿಂತಾಗಲೂ ಕೈಬೆರಳುಗಳು ನೆಲಕ್ಕೆ ತಾಗುವಷ್ಟು ಇದರ ತೋಳುಗಳು ಉದ್ದವಿರುತ್ತವೆ. ಇತರ ನರವಾನರಗಳಿಗಿಂತ ಇದರ ಹುಬ್ಬಿನ ಮೂಳೆಗಳು ಎತ್ತರವಾಗಿವೆ. ದಟ್ಟ ಹುಬ್ಬು ಹಾಗೂ ಮುಂಚಾಚಿದ ಇಳಿಜಾರು ಹಣೆ ಬಿಟ್ಟರೆ ಇದು ಸರಿಸುಮಾರು ಮಾನವರಂತೆಯೇ ಕಾಣುತ್ತದೆ.

ಈಶಾನ್ಯ ಭಾರತದ ದಟ್ಟ ಕಾಡುಗಳಲ್ಲಿ ಈ ಬಿಳಿಹುಬ್ಬಿನ ಗಿಬ್ಬನ್ ವಾಸಿಸುತ್ತವೆ. ಬಾಂಗ್ಲಾದೇಶ್ ಹಾಗೂ ಚೀನಾದ ಕೆಲ ಭಾಗಗಳಲ್ಲೂ ಇವನ್ನು ಕಾಣಬಹುದು. ಹಣ್ಣು, ಕಾಯಿ, ಹೂವು, ಎಲೆ ಮತ್ತು ಕೀಟಗಳನ್ನು ಇವು ತಿನ್ನುತ್ತವೆ. ಗಂಡು, ಹೆಣ್ಣು, ಜತೆಗೆ ಎರಡು ಅಥವಾ ಮೂರು ಮರಿಗಳ ಚಿಕ್ಕ ಕುಟುಂಬ ಇವುಗಳದ್ದು.

## ಬೆಕ್ಕಿನ ಕುಟುಂಬ

ಮನೆ ಬೆಕ್ಕು, ಹುಲಿ, ಚಿರತೆ, ಸಿಂಹ ಇವೆಲ್ಲವೂ ಬೆಕ್ಕಿನ *(ಫೆಲಿಡೆ)* ಕುಟುಂಬಕ್ಕೇ ಸೇರಿವೆ. ವೇಗವಾಗಿ ಚಲಿಸಲು ತಕ್ಕಂತೆ ಚುರುಕು ದೇಹವುಳ್ಳ ಇವು ಬೇಟೆ ಜೀವನಕ್ಕೆ ಅತ್ಯುತ್ತಮವಾಗಿ ಹೊಂದಿಕೊಂಡ ಮಾಂಸಾಹಾರಿಗಳಾಗಿವೆ. ಮಾಂಸವನ್ನು ಕಚ್ಚಿ ಸೀಳಲಿಕ್ಕೆ ತಕ್ಕಂತೆ (ಆದರೆ ಅಗಿಯಲಿಕ್ಕಲ್ಲ) ಹಲ್ಲುಗಳು ಹಾಗೂ ಬೇಟೆಯನ್ನು ಎಗರಿ ಹಿಡಿಯಲಿಕ್ಕೆ ಚೂಪಾದ ಪಂಜಗಳು ಹೇಳಿ ಮಾಡಿಸಿದಂತಿವೆ. ಬೇಟೆಯಾಡಲಿಕ್ಕೆಂದೇ ಒಗ್ಗಿ ಬೆಳೆದ ಈ ಅಂಗಾಂಗಗಳಿಗೆ ಸೂಕ್ತವಾದ ಚುರುಕು ಬುದ್ಧಿ ಹಾಗೂ ತೀಕ್ಷ್ಣ ಶ್ರವಣ ಶಕ್ತಿ ಇವುಗಳಿಗಿದೆ. ಬೆಕ್ಕುಗಳಿಗೆ ಇತರೆಲ್ಲ ಮಾಂಸಾಹಾರಿಗಳಿಗಿಂತ ದೊಡ್ಡದಾದ ಕಣ್ಣುಗಳಿದ್ದು ಉತ್ತಮ ದೃಷ್ಟಿಯೂ ಇದೆ. ಪ್ರಾಣಿಗಳ ಮೇಲೆ ಅನಿರೀಕ್ಷಿತವಾಗಿ ಎರಗಿ ಇವು ಬೇಟೆಯಾಡುತ್ತವೆ. ಬೇಟೆಗಾಗಿ ಎಷ್ಟು ಸಮಯವಾದರೂ ನಿಶ್ಶಬ್ದವಾಗಿ ಕಾದು ಕೂತು, ಅದು ಸಮೀಪ ಬಂದಾಗ ಹಠಾತ್ತಾಗಿ ಧಾವಿಸಿ ಇಲ್ಲವೆ ಛಂಗನೆ ಎಗರಿ

ಹಿಡಿಯುವ ಸಾಮರ್ಥ್ಯ ಇವಕ್ಕಿದೆ. ಕಾಡು ಬೆಕ್ಕುಗಳ ಹಲ್ಲುಗಳು ಮಾಂಸ ಕೀಳಲಿಕ್ಕೆ ತಕ್ಕಂತೆ ರೂಪುಗೊಂಡಿವೆ. ಕಚ್ಚಿ ಎಳೆದು ಹರಿಯಲಿಕ್ಕೆ ಕೋರೆಹಲ್ಲು, ಬಾಚಿ ಹಲ್ಲುಗಳು ಹಾಗೂ ಬಗೆದು ಸೀಳಿ ತುಂಡರಿಸಲಿಕ್ಕೆ ದವಡೆ ಹಲ್ಲುಗಳೂ ವಿಕಾಸಗೊಂಡಿವೆ.

ಹುಲಿಯೇ ಬೆಕ್ಕಿನ ಕುಟುಂಬದ ಅತಿ ದೊಡ್ಡ ಸದಸ್ಯನಾಗಿದ್ದು, ನಂತರದ ಕ್ರಮದಲ್ಲಿ ಸಿಂಹ ಹಾಗೂ ಚಿರತೆ ಬರುತ್ತವೆ. ಹಿಮ ಚಿರತೆ ಮತ್ತು ಹೊಗೆ ಚಿರತೆ ಇವೆರಡು ಭಾರತದಲ್ಲಿ ಕಂಡುಬರುವ ಇತರ ಚಿರತೆಗಳು. ಬೆಕ್ಕಿನ ಕುಟುಂಬದ ಇನ್ನೂ ಅನೇಕ ವಿಧದ ಪ್ರಾಣಿಗಳು ಭಾರತದಲ್ಲಿವೆ. ಉದಾ: ಅಮೃತ ಶಿಲೆಯ ಬೆಕ್ಕು, ಚಿನ್ನದ ಬೆಕ್ಕು, ಚಿರತೆ ಬೆಕ್ಕು, ಮೀನುಗಾರ ಬೆಕ್ಕು, ಕಾಡುಬೆಕ್ಕು, ರಣಬೆಕ್ಕು (ಮರಳು ಬೆಕ್ಕು), ಪಲ್ಲಾಸ್‌ನ ಬೆಕ್ಕು – ಹೀಗೆ. ಬೆಕ್ಕಿನ ಕುಟುಂಬದ ಈ ಎಲ್ಲ ಸದಸ್ಯ ಪ್ರಾಣಿಗಳೂ ಈಗೀಗ ಬೇಟೆಗೆ ಬಲಿಯಾಗಿ ಇಲ್ಲವೆ ಆವಾಸದ ವಿನಾಶದಿಂದಾಗಿ ಅವಸಾನದ ಅಂಚಿನಲ್ಲಿವೆ.

## ಹುಲಿ

*Panthera tigris* (Linnaeus)

ಮಾಂಸಾಹಾರಿ ಪ್ರಾಣಿಗಳಲ್ಲೆಲ್ಲ ಹುಲಿ (ವರ್ಣಚಿತ್ರ–4) ಅತ್ಯಂತ ಚಮತ್ಕಾರಿಕ ಹಾಗೂ ರಾಜ ಗಾಂಭೀರ್ಯದ ಪ್ರಾಣಿ. ಅಷ್ಟೇ ಅಲ್ಲ, ಇದು ಅತ್ಯಂತ ಚುರುಕಿನ ಬೇಟೆಗಾರ ಕೂಡ ಹೌದು. ಉಷ್ಣವಲಯದ ಅರಣ್ಯಗಳಲ್ಲಿ, ಸಮುದ್ರ ತೀರದ ಕಾಂಡ್ಲ ಕಾಡುಗಳಲ್ಲಿ, ಜವುಳು ಭೂಮಿಯಲ್ಲಿ, ಉದುರೆಲೆ ಅರಣ್ಯಗಳಲ್ಲಿ, ಹುಲ್ಲುಗಾವಲಿನಲ್ಲಿ, ಹೀಗೆ ಭಾರತದ ವಿಧವಿಧವಾದ ಆವಾಸಗಳಲ್ಲಿ ಹುಲಿಗಳು ಜೀವಿಸುತ್ತವೆ. ಹುಲಿ ಉತ್ತಮ ಈಜುಗಾರ ಕೂಡ ಹೌದು. ಹಳದಿ ಮಿಶ್ರಿತ ಕೆಂಬಣ್ಣದ ಚರ್ಮದ ಮೇಲೆ ಅನಿರ್ದಿಷ್ಟ ಉದ್ದಗಲಗಳ ಅಡ್ಡಡ್ಡ ಕರೀಪಟ್ಟೆಗಳಿಂದಾಗಿ ಇದು ಎದ್ದು ಕಾಣುವ ಪ್ರಾಣಿ. ಇದರ ಕಾಲುಗಳ ಮೇಲೂ ಇಂಥ ಪಟ್ಟೆಗಳಿದ್ದು ಬಾಲದ ಮೇಲೆ ಕಪ್ಪು ಉಂಗುರಗಳಿರುತ್ತವೆ. ಹುಲಿಗೆ ವಾಸನೆ ಶಕ್ತಿ ಕಡಿಮೆ; ದೃಷ್ಟಿಯೂ ಅಷ್ಟೇನೂ ಚುರುಕಲ್ಲ. ಆದರೆ ಕಿವಿ ಮಾತ್ರ ತುಂಬಾ ತುಂಬಾ ಸೂಕ್ಷ್ಮ. ನಿಶ್ಚಲವಾಗಿ ನಿಂತ ಮಿಕವನ್ನು ಗಮನಿಸದೇ ಇದು ಅದರ ಪಕ್ಕದಲ್ಲೇ ನಡೆದು ಹೋದೀತು. ಆದರೆ ಆ ಮಿಕ ತನ್ನ ಕಿವಿಯನ್ನಾಗಲೀ ಕಾಲನ್ನಾಗಲೀ ಕೊಂಚ ಮಾತ್ರ ಸರಿಸಿದರೂ ಸಾಕು; ಹುಲಿಯ ಗಮನ ತಕ್ಷಣ ಅತ್ತ ಹರಿದು ಆ ಬಡಪಾಯಿಯ ಕತೆ ಮುಗಿಯುತ್ತದೆ.

ಹುಲಿ ತನ್ನ ಬೇಟೆಯ ಮೇಲೆ ತುಂಬ ಚಾಲಾಕಿನಿಂದ ಎರಗುತ್ತದೆ. ವಾಸನೆಯಿಂದಾಗಲೀ, ಸಪ್ಪಳದಿಂದಾಗಲೀ, ಕಣ್ಣೋಟದಿಂದಾಗಲೀ ಮಿಕಕ್ಕೆ ತನ್ನ ಇರವು ಗೊತ್ತಾಗದಂತೆ ಮೆಲ್ಲಗೆ ಸಾರಿ ಏಕಾಏಕಿ ಮೂರು ನಾಲ್ಕು ಹೆಜ್ಜೆಗಳಷ್ಟು ಛಂಗನೆ ನೆಗೆದು ದಾಳಿ ಮಾಡುತ್ತದೆ. ನಂತರ ಕಳೇಬರವನ್ನು ಮರೆಗೆ ಒಯ್ದು, ಹೊಟ್ಟೆ ತುಂಬುವವರೆಗೂ ತಿಂದು ಅಲ್ಲೇ ಸಮೀಪ ವಿರಮಿಸುತ್ತದೆ. ಮತ್ತೆ

ಪದೇಪದೇ ಅದೇ ಸ್ಥಳಕ್ಕೆ ಬರುತ್ತ, ಮಾಂಸ ಕೊಳೆತಿದ್ದರೂ ಅದನ್ನು ಪೂರ್ತಿ ತಿಂದು ಮುಗಿಸುತ್ತದೆ. ಕಾಡೆಮ್ಮೆ, ಮಿಕ ಮತ್ತು ಜಿಂಕೆಗಳಂಥ ದೊಡ್ಡ ದೊಡ್ಡ ಪ್ರಾಣಿಗಳೇ ಹುಲಿಯ ಮಾಮೂಲು ಆಹಾರ.

ವ್ಯಾಘ್ರ ಅದೆಷ್ಟೇ ಶಕ್ತಿಶಾಲಿಯಾಗಿದ್ದರೂ ಅದು ಸಾಧು ಪ್ರಾಣಿ. ಮನುಷ್ಯನನ್ನು ಕಂಡರೆ ಸಾಮಾನ್ಯವಾಗಿ ಭಯಪಡುವ ಇದು, ತೀರಾ ಅಪರೂಪದ ಸಂದರ್ಭದಲ್ಲಿ ಮಾತ್ರ ಅವರ ಮೇಲೆ ದಾಳಿ ಮಾಡುತ್ತದೆ. ಹುಲಿ ಅಸ್ವಸ್ಥವಾಗಿದ್ದು, ತನ್ನ ಬೇಟೆಯನ್ನು ಹಿಡಿಯಲು ಅಸಮರ್ಥವಾಗಿದ್ದರೆ ಅದು ದಾಳಿ ಎಸಗಬಹುದು. ತನ್ನ ಮರಿಗಳಿದ್ದಲ್ಲಿ ಅಥವಾ ತಾನು ಹಿಡಿದ ಬೇಟೆಯ ಬಳಿ ಹೊರಗಿನವರು ಬಂದಾಗ ಕೂಡಾ ಅದು ದಾಳಿ ಮಾಡುತ್ತದೆ.

ಹುಲಿಗಳು ಸಣ್ಣಪುಟ್ಟ ಕ್ರಿಮಿಕೀಟ ತಿಂದೂ ಜೀವಿಸಬಲ್ಲವು. ವಿಶೇಷವಾಗಿ ಮುದಿ ಹುಲಿಗಳು ಮಿಡತೆ, ಚೇಳು, ಮೀನು, ಏಡಿ, ಕಪ್ಪೆಗಳನ್ನು ಬೇಟೆಯಾಡುತ್ತವೆ. ದೊಡ್ಡ ಪ್ರಾಣಿಗಳ ಬೇಟೆಗೆ ಹೊರಡುವಾಗ ಹುಲಿ ದಟ್ಟ ಗಿಡಗಂಟಿಗಳ ಮೂಲಕ ಸಾಗಿ ನೇರವಾಗಿ ಹೋಗುವ ಬದಲು, ಮನುಷ್ಯ ನಿರ್ಮಿತ ಕಾಲ್ದಾರಿಗಳಲ್ಲೋ, ಕಾಡಿನ ಮಧ್ಯೆ ರಸ್ತೆಯಲ್ಲೋ, ನದಿಯ ದಡದಲ್ಲೋ ಸಾಗುತ್ತದೆ.

ಸಾಮಾನ್ಯವಾಗಿ ಏಕಾಂಗಿಯಾಗಿ, ಸ್ವೇಚ್ಛೆಯಿಂದ ಅಲೆಯುವ ಹುಲಿ, ಅಪರೂಪಕ್ಕೆ ಜೋಡಿಯ ಜತೆಗೂಡಿ ತುಂಬ ದೀರ್ಘಕಾಲ ಬಾಳುವುದೂ ಉಂಟು. ಗಂಡುಹೆಣ್ಣುಗಳ ಮಿಲನಕ್ಕೆ ಯಾವುದೇ ನಿರ್ದಿಷ್ಟ ಋತು ಇಲ್ಲವಾದರೂ, ಹೆಣ್ಣಿಗೆ ಬೆದೆ ಬಂದಾಗ ಮಾತ್ರ ಎರಡೂ ಒಟ್ಟಿಗೆ ಸೇರುತ್ತವೆ. ಗರ್ಭ ಕಟ್ಟಿದ 105ರಿಂದ 109 ದಿನಗಳಲ್ಲಿ ಹೆಣ್ಣು ಹುಲಿ 1ರಿಂದ 5ಮರಿಗಳಿಗೆ ಜನ್ಮ ಕೊಡುತ್ತದೆ. ಸಾಮಾನ್ಯವಾಗಿ ಎರಡು ಮರಿಗಳು ಜನಿಸುತ್ತವೆ. ಮರಿಗಳು ಅರ್ಧ ಪ್ರಾಯದವರೆಗೂ ತಾಯಿಯ ಜತೆಗೇ ಇರುವುದುಂಟು. ಹುಲಿಗಳ ಜೀವಿತಾವಧಿ 18ರಿಂದ 19ವರ್ಷಗಳು.

ಹುಲಿ ಸಂರಕ್ಷಣೆಯ ಯಶೋಗಾಥೆ ಭಾರತದ್ದಾಗಿದೆ. ಸುಮಾರು 50ವರ್ಷಗಳ ಹಿಂದೆ ನಮ್ಮಲ್ಲಿ 40,000 ಹುಲಿಗಳಿದ್ದುವೆಂದು ಅಂದಾಜು ಮಾಡಲಾಗಿತ್ತು. ಶಿಕಾರಿ ಹಾಗೂ ವಾಸದ ನೆಲೆಯ ನಾಶದಿಂದಾಗಿ ಅವುಗಳ ಸಂಖ್ಯೆ ಗಣನೀಯವಾಗಿ ಇಳಿದಿತ್ತು. 1972ರಲ್ಲಿ ನಡೆಸಿದ 'ರಾಷ್ಟ್ರೀಯ ಹುಲಿಗಣತಿ' ಕಾರ್ಯಾಚರಣೆಯಲ್ಲಿ ಒಟ್ಟು ಕೇವಲ 1,827 ವ್ಯಾಘ್ರಗಳು ಉಳಿದಿರುವುದು ಗೊತ್ತಾಯಿತು. ಇಂಥ ಭವ್ಯ ಪ್ರಾಣಿಯ ಅವನತಿಯ ಸ್ಥಿತಿಯನ್ನು ನೋಡಿ, ಭಾರತ ಸರಕಾರ 1973ರಲ್ಲಿ 'ಪ್ರೊಜೆಕ್ಟ್ ಟೈಗರ್' ಎಂಬ ಹುಲಿ ರಕ್ಷಣಾ ಯೋಜನೆಯನ್ನು ಜಾರಿಗೆ ತಂದಿತು. ಒಟ್ಟು ಒಂಭತ್ತು ಅಭಯಾರಣ್ಯಗಳನ್ನು ಹುಲಿ ಭಂಡಾರಗಳೆಂದು ಘೋಷಿಸಲಾಯಿತು. ಕ್ರಮೇಣ ಇಂಥ ಹುಲಿ ಭಂಡಾರಗಳ ಸಂಖ್ಯೆಯನ್ನು ಹೆಚ್ಚಿಸುತ್ತ ಹೋಗಿ ಈಗ ನಮ್ಮಲ್ಲಿ ಒಟ್ಟು 19 ಅಭಯಾರಣ್ಯ ರಾಷ್ಟ್ರೀಯ ಉದ್ಯಾನಗಳಾಗಿವೆ. ಅಲ್ಲಿನ ವಾಸಕ್ಷೇತ್ರದ ವ್ಯವಸ್ಥಿತ ಉಸ್ತುವಾರಿ ಹಾಗೂ ಸಂವರ್ಧನೆ ಸಾಧಿಸಿದ ಮೇಲೆ ಹುಲಿಗಳ ಸಂಖ್ಯೆ ಕ್ರಮೇಣ ಏರುತ್ತ ಬಂದಿದೆ. ಇಂದು ಭಾರತದ ಅರಣ್ಯಗಳಲ್ಲಿ 4000ಕ್ಕೂ ಹೆಚ್ಚು ಹುಲಿಗಳಿವೆಯೆಂದು ಅಂದಾಜು ಮಾಡಲಾಗಿದೆ.



ವರ್ಣಚಿತ್ರ –1: ಆಹಾರ ಜಾಲ



ವರ್ಣಚಿತ್ರ –2: ಬಂಗಾರದ ಲಂಗೂರ



ವರ್ಣಚಿತ್ರ –3: ಸಿಂಹಬಾಲದ ಸಿಂಗಳೀಕ



ವರ್ಣಚಿತ್ರ –4: ಹುಲಿ



ವರ್ಣಚಿತ್ರ –5: ಭಾರತದ ಸಿಂಹ



ವರ್ಣಚಿತ್ರ –6: ಚಿರತೆ



ವರ್ಣಚಿತ್ರ –7: ಹಿಮಾಲಯದ ಕಂದು ಕರಡಿ


ವರ್ಣಚಿತ್ರ -8: ಸೋಮಾರಿ ಕರಡಿ


ವರ್ಣಚಿತ್ರ -9: ಕೆಂಪು ಪಾಂಡಾ



ವರ್ಣಚಿತ್ರ -10: ಇರುವೆ ಭಕ್ಷಕ ಚಿಪ್ಪುಹಂದಿ



ವರ್ಣಚಿತ್ರ -11: ಕಾಡೆಮ್ಮೆ



ವರ್ಣಚಿತ್ರ –12: ಕಾಡಾನೆ

'ಹುಲಿ ಯೋಜನೆ' ಎಂಬುದು ಸರ್ವಾಂಗೀಣ ಸಂರಕ್ಷಣಾ ಯೋಜನೆ. ಹುಲಿಗಳನ್ನು ಅವುಗಳಷ್ಟಕ್ಕೇ ಪ್ರತ್ಯೇಕವಾಗಿ ರಕ್ಷಿಸಿದರೆ ಸಾಲದು. ಹುಲಿಗಳನ್ನು ರಕ್ಷಿಸುವುದೆಂದರೆ ಅವುಗಳ ಆಹಾರವಾದ ಜಿಂಕೆ, ಕಡವೆಗಳಂಥ ಸಸ್ಯಾಹಾರಿಗಳ ಸಂಖ್ಯೆಯನ್ನೂ ಸಹ ಹೆಚ್ಚಿಸಬೇಕು. ಸಸ್ಯಾಹಾರಿಗಳ ಸಂಖ್ಯೆಯನ್ನು ಹೆಚ್ಚಿಸುವುದೆಂದರೆ ಹುಲ್ಲುಗಾವಲು ಹಾಗೂ ಹಸಿರು ಆಚ್ಛಾದನೆಯೂ ಸಮೃದ್ಧವಾಗಬೇಕು; ವೈವಿಧ್ಯಮಯವಾಗಿರಬೇಕು. ಹೀಗಾಗಿ ಹುಲಿ ಸಂರಕ್ಷಣೆ ಎಂದರೆ ಇಡೀ ಜೀವಜಾಲದ ಸಂರಕ್ಷಣೆಯ ಕೆಲಸವೇ ಆಗುತ್ತದೆ.

ಜೀವಜಾಲದ ಸಂರಕ್ಷಣೆಯಲ್ಲಿ ಹುಲಿಯ ಪಾತ್ರ ಬಹು ದೊಡ್ಡದು. ಏಕೆಂದರೆ, ಅರಣ್ಯದ ಆಹಾರ ಪಿರಮಿಡ್ಡಿನ ಶಿಖರ ಬಿಂದುವಿನಲ್ಲಿ ಹುಲಿಯ ಸ್ಥಾನವಿದೆ. ಸಸ್ಯಾಹಾರಿಗಳ ಸಂಖ್ಯೆ ತೀರಾ ಹೆಚ್ಚಾಗದಂತೆ, ಅದರಿಂದಾಗಿ ಹಸಿರಿನ ಆವರಣ ನಾಶವಾಗಿ ಮಣ್ಣಿನ ಸವಕಳಿ ಆಗದಂತೆ ಹುಲಿ ನೋಡಿಕೊಳ್ಳುತ್ತದೆ. ದುರ್ಬಲ ಸಸ್ಯಾಹಾರಿಗಳ ಜೀವಹರಣ ಮಾಡುವ ಹುಲಿಯಿಂದಾಗಿ, ಕೇವಲ ಸ್ವಸ್ಥ, ಸಬಲ ಪ್ರಾಣಿವರ್ಗಗಳ ಸಂತತಿ ಮಾತ್ರ ಬದುಕುಳಿಯುವಂತಾಗಿ, ಇಡೀ ಅರಣ್ಯದ ಆರೋಗ್ಯ ಉತ್ತಮ ಸ್ಥಿತಿಯಲ್ಲಿರುವಂತಾಗುತ್ತದೆ.

1951ರಲ್ಲಿ ಮಧ್ಯಪ್ರದೇಶದ ರೇವಾ ಅರಣ್ಯದಲ್ಲಿ ಮೊಟ್ಟಮೊದಲ ಬಿಳಿ ಹುಲಿ ಮನುಷ್ಯನ ಸೆರೆಗೆ ಬಿತ್ತು. ಅದನ್ನು ಮಾಮೂಲು ಪಟ್ಟೆ ಹುಲಿಯೊಂದಿಗೆ ಸಂಕರ ಮಾಡಿದ್ದರಿಂದ ಇಂದು ಭಾರತದಲ್ಲಿ 40 ಬಿಳಿ ಹುಲಿಗಳಿವೆಯಲ್ಲದೆ, ವಿಶ್ವಾದ್ಯಂತ ಪ್ರಾಣಿ ಸಂಗ್ರಹಾಲಯಗಳಲ್ಲಿ ಅನೇಕ ಬಿಳಿ ಹುಲಿಗಳಿವೆ. ವಾಸಸ್ಥಾನ ಹಾಗೂ ಸ್ವಭಾವದಲ್ಲಿ ಬಿಳಿ ಹುಲಿಗೂ ಪಟ್ಟೆ ಹುಲಿಗೂ ಏನೂ ವ್ಯತ್ಯಾಸಗಳಿಲ್ಲ. ಬಿಳಿ ಹುಲಿಗಳ ತ್ವಚೆಯಲ್ಲಿ ಮೆಲಾನಿನ್ ಎಂಬ ವರ್ಣರಸಾಯನದ ಅಂಶ ಇರುವುದಿಲ್ಲ. ಇಂಥ ಒಂದು ತಳಿ ದೋಷದಿಂದಾಗಿ ಜನಿಸುವ ಬಿಳಿ ಹುಲಿಗಳು ಮೂಲತಃ ಪಟ್ಟೆ ಹುಲಿಯ ವಂಶಕ್ಕೇ ಸೇರಿದವುಗಳಾಗಿವೆ.

### ಸಿಂಹ

*(ಏಷ್ಯಾಟಿಕ್ ಲಯನ್) Panthera leo persica* (Meyer)

ಭಾರತದ ಸಿಂಹಕ್ಕೆ 'ಏಷ್ಯಾಟಿಕ್ ಸಿಂಹ' ಎಂತಲೂ ಹೇಳುತ್ತಾರೆ. ಹುಲಿಗೆ ಹೋಲಿಸಿದರೆ ಸಿಂಹ ತುಂಬ ಶೋಚನೀಯ ಸ್ಥಿತಿಯಲ್ಲಿದೆ. ಒಂದು ಕಾಲದಲ್ಲಿ ಉತ್ತರ ಭಾರತ, ಮಧ್ಯ ಭಾರತ, ರಾಜಸ್ತಾನ ಹಾಗೂ ದಕ್ಷಿಣದ ನರ್ಮದಾ ತೀರದವರೆಗಿನ ವಿಸ್ತಾರ ಪ್ರದೇಶಗಳೆಲ್ಲ ಸಿಂಹದ ವಾಸಸ್ಥಾನವಾಗಿತ್ತು. ಇದು ಅವು ಗುಜರಾತಿನ ಗಿರ್ ಅರಣ್ಯಕ್ಕಷ್ಟೇ ಸೀಮಿತವಾಗಿವೆ. (ವರ್ಣಚಿತ್ರ – 5) 1907ರಲ್ಲಿ ಗಿರ್‌ನಲ್ಲಿನ ಸಿಂಹಗಳಿಗೆ ಜುನಾಗಢದ ಮಹಾರಾಜನು ಸಂಪೂರ್ಣ ರಕ್ಷಣೆ ಘೋಷಿಸುವ ತುಸು ಮೊದಲು ಅಲ್ಲಿ ಕೇವಲ 13 ಸಿಂಹಗಳು ಉಳಿದಿದ್ದವು.

ಸಿಂಹದ ವಾಸಸ್ಥಾನ ಹುಲಿಗಳದಕ್ಕಿಂತ ಭಿನ್ನ. ಹುಲಿಗಳು ದಟ್ಟ ಕಾಡನ್ನು ಬಯಸುತ್ತವಾದರೆ ಸಿಂಹ ಕುರುಚಲು ಗಿಡಗಂಟಿಗಳಿರುವ ಉದುರೆಲೆ ಅರಣ್ಯವನ್ನೇ

ಇಷ್ಟಪಡುತ್ತದೆ. ತುಂಬ ಸೂಕ್ಷ್ಮ ಶ್ರವಣ ಶಕ್ತಿಯುಳ್ಳ ಇದು ರಾತ್ರಿ ಕಾಲದಲ್ಲೇ ಬೇಟೆಗೆ ಹೊರಡುತ್ತದೆ. ಆಫ್ರಿಕದ ಸಿಂಹಗಳಿಗೆ ಹೋಲಿಸಿದರೆ ನಮ್ಮ ಸಿಂಹಗಳ ಜೂಲು ಅಷ್ಟೇನೂ ದಟ್ಟವಾಗಿರುವುದಿಲ್ಲ. ಸಿಂಹಿಣಿಗೆ ಜೂಲು ಇರುವುದೇ ಇಲ್ಲ. ಮರಿ ಸಿಂಹಗಳ ಮೈಮೇಲೆ ಚುಕ್ಕಿ ಅಥವಾ ಪಟ್ಟೆಗಳಿರುತ್ತವಾದರೂ, ಬೆಳೆದ ಮೇಲೆ ಅವೆಲ್ಲ ಮಾಯವಾಗಿ, ಸಿಂಹದ ಮೈ ಬಣ್ಣ ತಿಳಿಹಳದಿ ಅಥವಾ ಮರಳಿನ ಬೂದು ಬಣ್ಣಕ್ಕೆ ತಿರುಗುತ್ತದೆ.

ಬೆಕ್ಕಿನ ಕುಟುಂಬದ ಪ್ರಾಣಿಗಳಲ್ಲಿ ಸಿಂಹಕ್ಕೇ ಅತಿ ದೊಡ್ಡ ಬಳಗವಿರುತ್ತದೆ. ಅಪರೂಪಕ್ಕೆ ಒಂದೆರಡು ಸಿಂಹಗಳು (ಅದರಲ್ಲೂ ವಿಶೇಷವಾಗಿ ಗಂಡು ಸಿಂಹಗಳು) ಒಂಟಿಯಾಗಿ ಜೀವಿಸಬಹುದೇ ವಿನಾ, ಸಾಮಾನ್ಯವಾಗಿ ಸಿಂಹಗಳೆಲ್ಲ ಗುಂಪುಗುಂಪಾಗಿ ಜೀವಿಸುವುದೇ ಹೆಚ್ಚು. ಸಿಂಹದ ಈ ಬಳಗಕ್ಕೆ ಇಂಗ್ಲೀಷ್‌ನಲ್ಲಿ 'ಪ್ರೈಡ್' ಎನ್ನುತ್ತಾರೆ. ಒಂದು ಬಳಗದಲ್ಲಿ ಪರಸ್ಪರ ರಕ್ತ ಸಂಬಂಧವುಳ್ಳ ಅನೇಕ ಸಿಂಹಿಣಿಗಳೂ, ಅವುಗಳ ಮರಿಗಳೂ ಇರುತ್ತವೆ. ದೊಡ್ಡ ಸಿಂಹಗಳು ಅಲ್ಪಾವಧಿಗೆ, ಕೆಲವೊಮ್ಮೆ ಒಂದೆರಡು ವರ್ಷಗಳ ಮಟ್ಟಿಗೆ ಈ ಬಳಗದೊಡನೆ ಉಳಿಯುತ್ತವೆ. ಬಳಗದ ಯಜಮಾನಿಕೆಗೆಂದು ಸಿಂಹಗಳು ಘೋರ ಕಾದಾಟ ನಡೆಸುವುದೂ ಉಂಟು. ಗೆದ್ದ ಸಿಂಹ ಇಡೀ ಬಳಗದ ಮುಖ್ಯಸ್ಥನಾಗುತ್ತದೆ. ಇದು ಮುದಿಯಾಗುತ್ತ ಬಂದ ಹಾಗೆ, ಎಳೆ ಸಿಂಹಗಳಲ್ಲಿ ಅತಿ ಬಲಿಷ್ಠವಾದುದು ಆ ಸ್ಥಾನವನ್ನು ಆಕ್ರಮಿಸಿ, ಮುದಿ ಸಿಂಹವನ್ನು ಬಳಗದಿಂದ ಓಡಿಸುತ್ತದೆ. ಮುದಿ ಸಿಂಹ ಈಗ ಹೊಸ ಬಳಗವನ್ನು ಹುಡುಕಿಕೊಳ್ಳಬೇಕು, ಇಲ್ಲವೆ ಒಂಟಿಯಾಗಿ ಬಾಳಬೇಕು.

ಜಿಂಕೆ, ದನ, ಹಂದಿ ಮತ್ತಿತರ ಶಾಕಾಹಾರಿ ಪ್ರಾಣಿಗಳನ್ನು ಸಿಂಹ ಬೇಟೆಯಾಡುತ್ತದೆ. ತಾಸಿಗೆ 80 ಕಿಲೋಮೀಟರ್ ವೇಗದಲ್ಲಿ, ಚಿಕ್ಕ ಅಂತರವನ್ನು ಅತಿ ಶೀಘ್ರವಾಗಿ ಕ್ರಮಿಸಿ ಇದು ಬೇಟೆಯ ಮೇಲೆ ಎರಗುತ್ತದೆ. ಎರಗಿ, ಬೇಟೆಯ ಬೆನ್ನ ಮೇಲೊಂದು ಪಂಜವನ್ನು ಅಮುಕಿ, ಇನ್ನೊಂದು ಪಂಜವನ್ನು ಪಕ್ಕೆಲುಬು ಅಥವಾ ಗಂಗೆದೊಗಲಿಗೆ ಒತ್ತಿ ಅದನ್ನು ಕೆಳಕ್ಕೆ ಬೀಳಿಸುತ್ತದೆ. ಬೇಟೆಯ ಉಸಿರು ನಿಲ್ಲುವವರೆಗೂ ಅದರ ಕುತ್ತಿಗೆಯನ್ನು ದವಡೆಯಲ್ಲಿ ಒತ್ತಿ ಹಿಡಿದು ಸಾಯಿಸುತ್ತದೆ. ಬೇಟೆಯಾಡುವ ಕೆಲಸ ಮುಖ್ಯವಾಗಿ ಸಿಂಹಿಣಿಯದೇ ಆಗಿದ್ದು, ಬೇಟೆ ಕೈವಶವಾದ ಮೇಲೆ ಗಂಡು ಸಿಂಹ ಅಲ್ಲಿಗೆ ಬರುತ್ತದೆ. ಸಿಂಹಗಳು ಕೇವಲ ಮಾಂಸವನ್ನು ಮಾತ್ರ ಅಷ್ಟಿಷ್ಟು ತಿಂದು, ಕೊನೆಗೆ ಮೂಳೆಗೆ ಅಂಟಿದ್ದನ್ನೂ ಚೊಕ್ಕಟಗೊಳಿಸದೇ ಹಾಗೇ ಬಿಡುವುದರಿಂದ, ಮಾಮೂಲಾಗಿ ನರಿ, ಕತ್ತೆ ಕಿರುಬ, ಹದ್ದಿನಂಥ ಪರಪುಷ್ಟ ಜೀವಿಗಳಿಗೆ ಬೇಕಾದಷ್ಟು ಆಹಾರ ಅಲ್ಲಿಯೇ ಉಳಿದಿರುತ್ತದೆ.

ಒಮ್ಮೆ ಹಿಡಿದ ಬೇಟೆಯನ್ನು ಹೊಟ್ಟೆ ಪೂರ್ತಿ ತಿನ್ನುವುದರಿಂದ ಸಿಂಹಗಳು ಮುಂದಿನ ಅನೇಕ ದಿನಗಳ ಕಾಲ ಹೊಸ ಬೇಟೆಗೆ ಹೋಗುವುದಿಲ್ಲ. ಆ ಅವಧಿಯಲ್ಲಿ ಸಿಂಹ ವಿಶ್ರಮಿಸುತ್ತಿರುವ ಸ್ಥಳದಲ್ಲಿ ಹಾಯಾಗಿ ಇತರ ಶಾಖಾಹಾರಿ ಪ್ರಾಣಿಗಳು ಸುಳಿದರೂ ಸಿಂಹ ಮಾತ್ರ ಮಿಸುಕುವುದೂ ಇಲ್ಲ. ಸಾಮಾನ್ಯವಾಗಿ ಸಿಂಹಗಳು ಮನುಷ್ಯರ ಮೇಲೆ ದಾಳಿ ಮಾಡುವುದಿಲ್ಲ. ಕೆಣಕಿದರೆ ಆ ಮಾತು ಬೇರೆ. ಹಠಾತ್ತಾಗಿ

ದಿಗಿಲು ಬಿದ್ದಾಗ, ಇಲ್ಲವೆ ಗಾಯಗೊಂಡಾಗ, ಅಥವಾ ಅಸ್ವಸ್ಥವಾಗಿದ್ದಾಗ ಮಾತ್ರ ಅವು ಮನುಷ್ಯರಿಗೆ ಅಪಾಯಕಾರಿ ಆಗಬಲ್ಲವು. ಮುದಿ ಸಿಂಹಗಳು ಆಗಾಗ ಮನುಷ್ಯರ ಮೇಲೆ ದಾಳಿಗೆ ಬರುವುದುಂಟು. ಆದರೆ ಇದೂ ತುಂಬಾ ಅಪರೂಪ. ದೊಡ್ಡ ಪ್ರಾಣಿಗಳನ್ನು ಹಿಡಿಯಲು ಸಾಧ್ಯವಿಲ್ಲದಷ್ಟು ಮುದಿ ಅವಸ್ಥೆ ತಲುಪಿದ ಸಿಂಹಗಳು ಆಹಾರಕ್ಕಾಗಿ ಚೇಳು, ಓತಿಕ್ಯಾತಗಳಂಥ ಕಿರು ಪ್ರಾಣಿಗಳನ್ನೂ, ಇಲಿ ಮೊಲದಂಥ ದಂಶಕಗಳನ್ನೂ ಹಿಡಿದು ತಿಂದು ದಿನ ನೂಕುತ್ತವೆ.

ಪ್ರಾಪ್ತ ವಯಸ್ಸಿಗೆ ಬಂದ ಸಿಂಹಗಳಿಗೆ ಮಿಲನದ ಋತು ಇಂಥದೇ ಎಂಬುದಿಲ್ಲ. ಸಿಂಹಿಣಿಗೆ ಬೆದೆ ಬಂದಾಗ ಗಂಡು ಹೆಣ್ಣು ಜತೆಗೂಡುತ್ತವೆ. ಮಿಲನದ ಸುಮಾರು 110 ದಿನಗಳ ನಂತರ 1ರಿಂದ 6 ಮರಿಗಳು ಜನಿಸುತ್ತವೆ. ಮೈಮೇಲೆ ಚುಕ್ಕೆಗಳಿರುವ ಈ ನಿಸ್ಸಹಾಯಕ ಮರಿಗಳು ಚಿರತೆಯ ಬಾಯಿಗೋ ಕತ್ತೆಕಿರುಬಗಳ ದಾಳಿಗೋ ಬಲಿಯಾಗಬಹುದು. ಹುಟ್ಟಿದ ಬಹಳಷ್ಟು ಮರಿಗಳು ಬಹುಕಾಲ ಜೀವಿಸಿರುವುದಿಲ್ಲ. ಆದರೆ ಬದುಕುಳಿದವು ಮಾತ್ರ ತುಂಬ ಶೀಘ್ರವಾಗಿ ಬೆಳೆಯುತ್ತವೆ. ಒಂದೇ ವರ್ಷದಲ್ಲಿ ತಾವೇ ಬೇಟೆಗೆ ಹೊರಡುತ್ತವೆ. ಎರಡು ವರ್ಷಗಳಲ್ಲಿ ಪ್ರಾಯಕ್ಕೆ ಬರುತ್ತವೆ. ಲೆಕ್ಕಾಚಾರದ ಪ್ರಕಾರ ಒಂದು ಸಿಂಹದ ಆಯುಸ್ಸು 20–30 ವರ್ಷಗಳು. ಆದರೆ ಕಾಡಿನ ಪೈಪೋಟಿಯ ಪರಿಸರದಲ್ಲಿ ಅವು ಅಷ್ಟು ಕಾಲ ಬಾಳುವುದು ತುಂಬ ಅಪರೂಪ.

ಈ 'ಕಾಡಿನ ರಾಜ'ನನ್ನು ನಮ್ಮ ರಾಷ್ಟ್ರೀಯ ಮೃಗ ಎಂದೇ ಹಿಂದೆ ಪರಿಗಣಿಸಲಾಗಿತ್ತು. ಈಗ ಹುಲಿಗೆ ಆ ಪಟ್ಟವನ್ನು ನೀಡಲಾಗಿದೆ. ಇತ್ತ ಸಿಂಹದ ಬೇಟೆಯಾಡುವವರ ಸಂಖ್ಯೆ ಹೆಚ್ಚುತ್ತ ಹೋಗಿ, ಮಾನವನ ಅತಿಕ್ರಮಣ ಅತಿಯಾಗುತ್ತ ಅದರ ಆವಾಸ ನಾಶವಾಗುತ್ತ ಬಂದಂತೆಲ್ಲ ಸಿಂಹಗಳ ಸಂತತಿಯೇ ಅವಸಾನದ ಅಂಚಿಗೆ ಬಂದಿದೆ. ಗುಜರಾತಿನ ಗಿರ್ ಅರಣ್ಯದ ಕಟ್ಟುನಿಟ್ಟಿನ ಸಂರಕ್ಷಣೆಯಲ್ಲಿ ಇನ್ನೂರಕ್ಕೂ ತುಸು ಹೆಚ್ಚಿನ ಸಂಖ್ಯೆಯ ಸಿಂಹಗಳು ಬದುಕುಳಿದಿವೆ. ಮೃಗಾಲಯಗಳಲ್ಲಿ ಸಾಕಿಟ್ಟ ಸಿಂಹಗಳನ್ನು ಬಿಟ್ಟರೆ, ಈ ಗಿರ್ ಅರಣ್ಯವೇ ಏಷ್ಯದ ಸಿಂಹಗಳ ಕೊನೆಯ ಆವಾಸವಾಗಿದೆ.

### ಚಿರತೆ

*(ಲೆಪರ್ಡ್ ಅಥವಾ ಪ್ಯಾಂಥರ್) Panthera pardus* (Linnaeus)

ಅತ್ಯಂತ ಚುರುಕಿನ ಸ್ತನಿಗಳಲ್ಲೊಂದೆನಿಸಿದ ಈ ಪ್ರಾಣಿ (ವರ್ಣಚಿತ್ರ –6) ಹುಲಿ ಅಥವಾ ಸಿಂಹಕ್ಕಿಂತ ತುಸು ಚಿಕ್ಕ ಗಾತ್ರದ್ದಾಗಿದೆ. ಇದಕ್ಕೆ ಭಯ ಎಂಬುದು ಇಲ್ಲವೇ ಇಲ್ಲ. ಕೀಟಲೆಗೆ ಬಂದವರ ಜತೆ ಕೊನೆಯುಸಿರವರೆಗೂ ಹೋರಾಡುವ ಛಲ ಇದಕ್ಕಿದೆ. ಕಾಡಿನ ಆಚೆ, ಗಿಡಮರಗಳು ಇಲ್ಲದಲ್ಲಿ ಕಲ್ಲುಬಂಡೆ ಅಥವಾ ಅರೆ ಮರುಭೂಮಿಯ ಪ್ರದೇಶಗಳಲ್ಲಿ ವಾಸಿಸುವ ಚಿರತೆಗಳು ಮಾಸಲು ಬಣ್ಣದ್ದಿದ್ದು ಕೊಂಚ ದೊಡ್ಡ ಗಾತ್ರದ್ದಿರುತ್ತವೆ. ಅವು ಸುಮಾರು ಒಂದು, ಒಂದೂವರೆ ಮೀಟರು ಉದ್ದವಿದ್ದು 90 ಕಿಲೋ ತೂಕದ್ದಾಗಿರುತ್ತವೆ. ಆದರೆ ಗುಡ್ಡಗಾಡಿನ ಅರಣ್ಯದಲ್ಲಿ,

ತಗ್ಗಿನ ಪ್ರದೇಶದಲ್ಲಿ ವಾಸಿಸುವ ಚಿರತೆಗಳು ಚಿಕ್ಕ ಗಾತ್ರದ್ದಿದ್ದು, ಕಪ್ಪು ಬಣ್ಣದ ದೊಡ್ಡ ದೊಡ್ಡ ಚುಕ್ಕಿ ಅಥವಾ ಉಂಗುರದ ವಿನ್ಯಾಸ ಪಡೆದಿರುತ್ತವೆ. ಕೆಲವೆಡೆ ಇಡೀ ಶರೀರವೇ ಕಪ್ಪು ಬಣ್ಣದ್ದಾಗಿರುವ ಚಿರತೆಗಳಿದ್ದು ಇವಕ್ಕೆ ನಾವು 'ಬ್ಲ್ಯಾಕ್ ಪ್ಯಾಂಥರ್' ಎನ್ನುತ್ತೇವೆ. ಭಾರತದಲ್ಲಿನ ಬಹುತೇಕ ಚಿರತೆಗಳಿಗೆ ಹಳದಿ ಇಲ್ಲವೆ ಬೂದು ಬಣ್ಣದ ಚರ್ಮದ ಮೇಲೆ ಪುಟ್ಟ ಕಪ್ಪು ಸುರುಳಿ ಚಿಹ್ನೆ ಇರುತ್ತದೆ. ಹಗಲುವೇಳೆ ಸಾಮಾನ್ಯವಾಗಿ ಎಲ್ಲ ಚಿರತೆಗಳೂ ಗುಹೆಯಲ್ಲೋ ನೆರಳಿನ ಮರೆಯಲ್ಲೋ ಅವಿತಿರುತ್ತವೆ. ಹೆಚ್ಚಿನದಾಗಿ ಒಂಟಿಯಾಗಿಯೇ ಬೇಟೆಗೆ ಹೊರಡುತ್ತವಾದರೂ, ಅಪರೂಪಕ್ಕೆ ಒಂದಿಬ್ಬರು ಸಂಗಾತಿಗಳ ಜತೆ ಬೇಟೆ ಹುಡುಕುವುದೂ ಇದೆ.

ನೀರಿನ ತಡಿಯ ಬಳಿ ಇರುವ ಮರದ ಮೇಲೆ ಇಲ್ಲವೆ, ಎತ್ತರದ ಬಂಡೆಯ ಮೇಲೆ ಸಾಮಾನ್ಯವಾಗಿ ಅವಿತು ಕೂತಿರುವ ಚಿರತೆ ಹಠಾತ್ತಾಗಿ ಬೇಟೆಯ ಮೇಲೆ ಜಿಗಿಯುತ್ತದೆ. ಬೇಟೆ ತೀರಾ ದೊಡ್ಡದಿದ್ದರೆ, ಒಂದೇ ಬಾರಿಗೆ ತಿಂದು ಮುಗಿಸಲು ಸಾಧ್ಯವಿಲ್ಲದಿದ್ದರೆ ಅದು ಶವವನ್ನು ಕತ್ತೆ ಕಿರುಬಗಳ ಕೈಗೆ ಸಿಗದಂತೆ ಮಾಡಲು ತನ್ನ ನೆಲೆಯವರೆಗೂ ಎಳೆದೊಯ್ಯುತ್ತದೆ. ಅದಕ್ಕೆ ಬೇಟೆಗೆ ಇಂಥದೇ ಪ್ರಾಣಿ ಆಗಬೇಕೆಂದಿಲ್ಲ. ಜಿಂಕೆ, ದನ, ಕೋತಿ, ಮೊಲ, ಹಕ್ಕಿ, ಹಾವು, ಉಡ, ಏನಿದ್ದರೂ ಆಗುತ್ತದೆ. ಚಿರತೆಯ ಮುಖ್ಯ ವೈರಿ ಎಂದರೆ ಹುಲಿ. ಇವೆರಡೂ ಒಂದೇ ಆಹಾರ ಮೂಲವನ್ನ ಹುಡುಕುತ್ತವಾದ್ದರಿಂದ ಪರಸ್ಪರ ದ್ವೇಷಿಸುತ್ತವೆ. ಸೀಳು ನಾಯಿಗಳೂ, ಕತ್ತೆ ಕಿರುಬಗಳೂ ಅಪರೂಪಕ್ಕೆ ಚಿರತೆಯನ್ನು ಎದುರಿಸುವ ಧೈರ್ಯ ತೋರುವುದೂ ಉಂಟು.

ಹೆಣ್ಣು ಚಿರತೆ ಗರ್ಭ ಧರಿಸಿದ 92 ರಿಂದ 95 ದಿನಗಳಲ್ಲಿ ಒಂದರಿಂದ ನಾಲ್ಕು ಮರಿಗಳವರೆಗೆ ಜನ್ಮ ನೀಡುತ್ತದೆ, ಸಾಮಾನ್ಯವಾಗಿ ಎರಡು. ಈ ಮರಿಗಳು ಮೊದಲ ಆರು ತಿಂಗಳು ತಾಯಿಯ ಜತೆಗಿದ್ದು ನಂತರ ಬೇರೆಯಾಗುತ್ತವೆ. ಒಂದು ಚಿರತೆ ಸುಮಾರು ಇಪ್ಪತ್ತು ವರ್ಷಗಳ ಕಾಲ ಬದುಕಿರುತ್ತದೆ.

ಭಾರತದಲ್ಲಿನ ಅರಣ್ಯ ಪ್ರದೇಶಗಳಲ್ಲಿ, ಕುರುಚಲು ಕಾಡುಗಳಲ್ಲಿ ಹಾಗೂ ಬಯಲು ಭಾಗಗಳಲ್ಲೂ ಚಿರತೆಗಳು ಕಂಡುಬರುತ್ತವೆ.

## ಹೊಗೆ ಚಿರತೆ

*(ಕ್ಲೌಡೆಡ್ ಲೆಪರ್ಡ್) Neofelis nebulosa* (Griffith)

ಹೊಗೆ ಚಿರತೆಗಳು ಸಾಮಾನ್ಯ ಚಿರತೆಗಳಿಗಿಂತ ಚಿಕ್ಕವಾಗಿದ್ದರೂ ಅವುಗಳ ಬಾಲ ಮಾತ್ರ ತುಂಬಾ ಉದ್ದುದ್ದಾಗಿರುತ್ತದೆ. ಮೋಡ ಅಥವಾ ದಟ್ಟ ಹೊಗೆಯಂತೆ ಕಾಣುವ ಕಂದು ಮತ್ತು ಕಪ್ಪು ಛಾಯೆಯ ಮಚ್ಚೆಗಳು ಇವುಗಳ ಮಣ್ಣಿನ ಬಣ್ಣದ ತುಪ್ಪಳಗಳ ಮೇಲೆ ಇಡೀ ಮೈತುಂಬ ಕಾಣುತ್ತವಾದ್ದರಿಂದ 'ಮೋಡದ ಚಿರತೆ' ಅಥವಾ 'ಹೊಗೆ ಚಿರತೆ' ಎಂಬ ಹೆಸರು ಇವಕ್ಕೆ ಬಂದಿದೆ. ಇವುಗಳ ತಲೆಯ ಮೇಲೆ ಚುಕ್ಕೆಗಳಿದ್ದು ಕೆನ್ನೆಯ ಮೇಲೆ ಕಪ್ಪು ಪಟ್ಟೆಗಳಿರುತ್ತವೆ. ಕಾಲು ಮತ್ತು ಹೊಟ್ಟೆಯ

ಕೆಳಭಾಗದಲ್ಲಿ ಅಂಡಾಕೃತಿಯ ದೊಡ್ಡ ಮಚ್ಚೆಗಳು, ಬಾಲದುದ್ದಕ್ಕೂ ಕಂದು ಹೊಗೆ ಬಣ್ಣದ ಉಂಗುರಗಳೂ ಈ ಚಿರತೆಯ ಮುಖ್ಯ ಲಕ್ಷಣ.



ಹೊಗೆ ಚಿರತೆಗಳು ಸಿಕ್ಕಿಂ, ಅರುಣಾಚಲ ಪ್ರದೇಶ, ನಾಗಾಲ್ಯಾಂಡ್ ಮತ್ತು ಅಸ್ಸಾಂನ ಪೂರ್ವಭಾಗದಲ್ಲಿ ಕಾಣಸಿಗುತ್ತವೆ. ಅವು ಹೆಚ್ಚಾಗಿ ಮರಗಳ ಮೇಲೆ ವಾಸಿಸುವ ನಿಶಾಚರಿಗಳು. ಸಾಮಾನ್ಯವಾಗಿ ಚಿಕ್ಕ ಪುಟ್ಟ ಸ್ತನಿ ಪ್ರಾಣಿಗಳನ್ನೂ ಹಕ್ಕಿ ಪಕ್ಷಿಗಳನ್ನೂ ಹಿಡಿದು ತಿನ್ನುತ್ತವಾದರೂ ಅವು ಅಪರೂಪಕ್ಕೆ ಜಿಂಕೆ, ಮೇಕೆಗಳಂಥ ದೊಡ್ಡ ಪ್ರಾಣಿಗಳ ಬೇಟೆಯಾಡುವುದೂ ಉಂಟು.

## ಚಿರತೆ ಬೆಕ್ಕು

*(ಲೆಪರ್ಡ್ ಕ್ಯಾಟ್) Felis bengalensis* Kerr

ಹೆಚ್ಚುಕಮ್ಮಿ ಮನೆ ಬೆಕ್ಕಿನ ಗಾತ್ರದ್ದೇ ಆದ ಈ ಚಿರತೆ ಬೆಕ್ಕು ನೋಡಲು ಪುಟ್ಟ ಚಿರತೆಯಂತೆಯೇ ಕಾಣುತ್ತದೆ. ತುಂಬ ಸುಂದರ ಪ್ರಾಣಿ. ಕಂದು ಕೆಮ್ಮಣ್ಣಿನ ಬಣ್ಣದ ತುಪ್ಪಳದ ಮೇಲೆ ಅಚ್ಚ ಕಪ್ಪು ಇಲ್ಲವೆ ತುಕ್ಕಿನ ಬಣ್ಣದ ಚುಕ್ಕಿಗಳಿರುತ್ತವೆ. ಮೈಮೇಲಿನ ಇತರ ಗುರುತುಗಳೆಲ್ಲ ಇನ್ನುಳಿದ ಚಿರತೆಗಳ ಹಾಗೆಯೇ. ಭಾರತದ ಎಲ್ಲೆಡೆ ಕಾಣುವ ಇದು ಕಾಡಿನ ಜೀವನಕ್ಕೆ ಹೊಂದಿಕೊಂಡಿದ್ದರೂ, ಹಳ್ಳಿಗಳಿಗೆ ಆಗಾಗ ನುಸುಳಿ ಕೋಳಿ ಮತ್ತಿತರ ಸಾಕುಪ್ರಾಣಿಗಳನ್ನು ಹಿಡಿದೊಯ್ಯುವುದೂ ಉಂಟು. ಸಾಮಾನ್ಯವಾಗಿ ಇದು ಚಿಕ್ಕಪುಟ್ಟ ಸ್ತನಿಗಳನ್ನೂ, ಪಕ್ಷಿಗಳನ್ನೂ ಬೇಟೆಯಾಡುತ್ತದೆ.



**ಹಿಮಚಿರತೆ**

*(ಸ್ನೋ ಲೆಪರ್ಡ್) Panthera uncia* (Schreber)

ವಿನಾಶದ ಅಂಚಿಗೆ ಬಂದಿರುವ ಇತರ ಮಾಂಸಾಹಾರಿ ಪ್ರಾಣಿಗಳಿಗೆ ಹೋಲಿಸಿದರೆ, ಭಾರತದ ಎಲ್ಲ ಬಗೆಯ ಭೌಗೋಳಿಕ ಪ್ರದೇಶಗಳಲ್ಲೂ ಕಂಡುಬರುವ ಚಿರತೆ ಅಥವಾ ಪ್ಯಾಂಥರ್‌ಗಳ ಸ್ಥಿತಿ ಅಷ್ಟೇನೂ ಚಿಂತಾಜನಕವಾಗಿಲ್ಲ. ಆದರೆ ಹೊಗೆ ಚಿರತೆ, ಹಿಮ ಚಿರತೆಗಳಂಥ ಕೆಲವು ಪ್ರಭೇದಗಳು ಅಳಿವಿನ ಅಂಚಿಗೆ ಬಂದಿವೆ.



ಮಾಮೂಲು ಚಿರತೆಗಳಿಗೆ ಹೋಲಿಸಿದರೆ ಹಿಮಚಿರತೆ ಚಿಕ್ಕದಾಗಿದ್ದರೂ, ದಪ್ಪ ತುಪ್ಪಳದಿಂದಾಗಿ ಅದೂ ದೊಡ್ಡದಾಗಿಯೇ ಕಾಣುತ್ತದೆ. ಕೆನೆ ಬಿಳಿಯ ಶುಭ್ರ ತುಪ್ಪಳದ ಮೇಲೆ ಗುಲಾಬಿ ಗೊಂಚಲಿನಂಥ ಬೂದುಬಣ್ಣದ ಚುಕ್ಕೆಗಳಿದ್ದು, ಇದರ ಈ ದಪ್ಪ, ಮೃದು ತುಪ್ಪಳ ನೋಡಲು ಬಲು ಸುಂದರ. ಈ ಪ್ರಾಣಿ 3,000–4,000

ಮೀಟರ್ ಎತ್ತರದ ಹಿಮಾಲಯದ ಪರ್ವತ ಶ್ರೇಣಿಗಳಲ್ಲಿ ಜೀವಿಸುತ್ತದೆ. ಚಳಿಗಾಲದಲ್ಲಿ ಮಾತ್ರ ಇದು ಕೆಳಕ್ಕಿಳಿದು 2,000 ಮೀಟರ್‌ವರೆಗಿನ ತಗ್ಗಿನ ಪ್ರದೇಶಕ್ಕೂ ವಲಸೆ ಬರುತ್ತದೆ. ಗುಡ್ಡದ ಮೇಕೆಗಳನ್ನೂ, ಆಡು, ಮೊಲ, ಐಬೆಕ್ಸ್ (ಕಾಡುಮೇಕೆ) ಮತ್ತು ಚಮರೀ ಮೃಗಗಳನ್ನೂ ಇದು ಬೇಟೆಯಾಡುತ್ತದೆ.

### ಚಿನ್ನದ ಬೆಕ್ಕು

*(ಗೋಲ್ಡನ್ ಕ್ಯಾಟ್) Felis temmincki* Vigors & Horsfield

ಮನೆ ಬೆಕ್ಕಿಗಿಂತ ಕೊಂಚ ದೊಡ್ಡದಾದ ಚಿನ್ನದ ಬೆಕ್ಕಿಗೆ ಹೆಸರಿಗೆ ತಕ್ಕಂತೆ ಕಂದು ಚಿನ್ನದ ವರ್ಣದ ತುಪ್ಪಳ ಇದೆ. ಸಿಕ್ಕಿಂನಿಂದ ಹಿಡಿದು ಅಸ್ಸಾಂವರೆಗಿನ ಈಶಾನ್ಯ ಭಾರತದ ದಟ್ಟಡವಿಗಳಲ್ಲಿ ಇದರ ಆವಾಸವಿದೆ. ಈ ಬೆಕ್ಕಿನ ಒಂದು ವಿಶಿಷ್ಟ ಲಕ್ಷಣ ಏನೆಂದರೆ, ಇದರ ಮೂಗಿನ ಮೇಲ್ಭಾಗದಲ್ಲಿ ಕಣ್ಣುಗಳ ಅಂಚಿಗೆ ಬಿಳಿ ಪಟ್ಟೆಗಳಿವೆ. ಈ ಅಡ್ಡಪಟ್ಟೆಗಳ ಜತೆಗೆ ಕಪ್ಪು ಗೆರೆಗಳಿವೆ.



### ಪಲ್ಲಾಸ್ ಬೆಕ್ಕು

*Felis manul* Pallas

ಈ ಬೆಕ್ಕೂ ಸಹ ಮನೆಬೆಕ್ಕಿನ ಗಾತ್ರದ್ದೇ ಆದರೂ ಇದಕ್ಕೆ ರೋಮಭರಿತ ಉದ್ದನ್ನ ಬಾಲವಿರುತ್ತದೆ. ತುದಿಗೆ ಗುಚ್ಛವಿರುವ ಈ ಬಾಲದುದ್ದಕ್ಕೂ ದಟ್ಟ ಕಂದುಬಣ್ಣದ ಉಂಗುರಗಳಿರುತ್ತವೆ. ಮೃದುವಾದ ಬೆಳ್ಳಿ ಮಿರುಗಿನ ಬೂದು ಅಥವಾ ತಿಳಿ ಹಳದಿ ತುಪ್ಪಳ; ಬೆನ್ನಿನ ಹಿಂಭಾಗದಲ್ಲಿ ಕಂಡೂ ಕಾಣದಂತಿರುವ ನಸುಗಪ್ಪಿನ ಪಟ್ಟೆಗಳು; ಚಿಕ್ಕ ಕಿವಿ; ಕೆನ್ನೆಯ ಮೇಲೆ ಜೋಡಿ ಪಟ್ಟೆಗಳು ಈ ಬೆಕ್ಕಿನ ಮೇಲ್ನೈ ಲಕ್ಷಣಗಳಾಗಿವೆ. ಗೂಬೆಯ ಧ್ವನಿ ಅಥವಾ ಚಿಕ್ಕ ನಾಯಿಯ ಬೊಗಳುವ ಧ್ವನಿಗೆ ಹೋಲುವಂಥ ಸ್ವರ ಎತ್ತಿ ಇದು ಗರ್ಜಿಸುತ್ತದೆ.



ಲಡ್ಡಾಖ್, ಜಮ್ಮು ಮತ್ತು ಕಾಶ್ಮೀರದ ಕಲ್ಲು ಬಂಡೆಗಳ ಪರಿಸರದಲ್ಲಿ ವಾಸಿಸುವ ಈ ಬೆಕ್ಕು ಚಿಕ್ಕಪುಟ್ಟ ಸ್ತನಿಗಳನ್ನೂ ಹಕ್ಕಿಪಕ್ಷಿಗಳನ್ನೂ ಹಿಡಿದು ತಿನ್ನುತ್ತದೆ. ಕಲ್ಲುಬಂಡೆಗಳ ಮೈಬಣ್ಣವೇ ಇದಕ್ಕೂ ಇದೆಯಾದ್ದರಿಂದ ವೈರಿಗಳಿಗೆ ಹಾಗೂ ಮಿಕಗಳಿಗೆ ಪತ್ತೆಯಾಗದಂತೆ ಇದು ಚಲಿಸಬಹುದಾಗಿದೆ.

**ಭಾರತದ ರಣಬೆಕ್ಕು**

*(ಇಂಡಿಯನ್ ಡೆಸರ್ಟ್ ಕ್ಯಾಟ್) Felis Silvestris ornata* Gray

ಇದೂ ಮನೆ ಬೆಕ್ಕಿನ ಗಾತ್ರದ್ದೇ ಆಗಿದ್ದು ಇದರ ಕಂದು ಹಳದಿ ಶರೀರದ ಮೇಲೆ ಕಪ್ಪು ಚುಕ್ಕೆಗಳಿರುತ್ತವೆ. ಬಾಲದ ಕೊನೆಯ ಅರ್ಧಭಾಗದಲ್ಲಿ ಕಪ್ಪು ಉಂಗುರಗಳಿದ್ದು, ನೆಲಕ್ಕೆ ಸಮಾನಾಂತರವಾಗಿ ಎರಡು ಕರೀ ಪಟ್ಟೆಗಳಿರುತ್ತವೆ.



ರಾಜಾಸ್ತಾನ ಮತ್ತು ಕಚ್ಛದ ರಣ ಹಾಗೂ ಮಧ್ಯ ಭಾರತದ ಕುರುಚಲು ಕಾಡಿನಲ್ಲಿ ವಾಸಿಸುವ ಈ ಬೆಕ್ಕು ಈಗ ವಿನಾಶದ ಅಂಚಿನಲ್ಲಿದೆ. ಇದರ ಸುಂದರ ತುಪ್ಪಳಕ್ಕಾಗಿ

ಮನುಷ್ಯರು ಇದನ್ನು ಕಂಡಲ್ಲಿ ಬೇಟೆಯಾಡುತ್ತ ಬಂದಿದ್ದರಿಂದ ರಣಬೆಕ್ಕನ್ನು ಪತ್ತೆ ಹಚ್ಚುವುದೇ ಕಠಿಣವಾಗಿದೆ.

## ಮೀನುಗಾರ ಬೆಕ್ಕು

*(ಫಿಶಿಂಗ್ ಕ್ಯಾಟ್) Felis viverrina* Bennet

ಚರ್ಮದ ಅಂದಕ್ಕಾಗಿ ಮಾನವನ ದಾಳಿಗೆ ತುತ್ತಾದ ಪುಟ್ಟ ಬೆಕ್ಕುಗಳ ಪಟ್ಟಿಯಲ್ಲಿ ಈ ಮೀನುಗಾರ ಬೆಕ್ಕೂ ಸೇರುತ್ತದೆ. ಮನೆ ಬೆಕ್ಕಿಗಿಂತ ಕೊಂಚ ದೊಡ್ಡ ಗಾತ್ರದ ಇದಕ್ಕೆ ನಸುಗೆಂಪು ಛಾಯೆಯ ಕಂದು ಬಣ್ಣದ ತುಪ್ಪಳವಿದ್ದು, ಅಲ್ಲಲ್ಲಿ ಕಪ್ಪು ಚುಕ್ಕೆಗಳಿರುತ್ತವೆ. ಈ ಬೆಕ್ಕಿನ ಬಾಲ ಚಿಕ್ಕದು. ಕೆನ್ನೆಯ ಮೇಲೆ ಒಂದು ಜೋಡಿ ಪಟ್ಟೆ ಹಾಗೂ ಹಣೆಯ ಮೇಲೆ ಆರರಿಂದ ಎಂಟು ನಾಮಗಳಿಂದಾಗಿ ಇದನ್ನು ಎಲ್ಲಿದ್ದರೂ ಗುರುತಿಸಬಹುದು. ಇದರ ಇನ್ನೊಂದು ಮುಖ್ಯ ಲಕ್ಷಣ ಏನೆಂದರೆ, ಕಾಲ್ಬೆರಳುಗಳ ಸಂದುಗಳಲ್ಲಿ ಬಾತುಕೋಳಿಗಿರುವಂಥ ಜಾಲಪಾದಗಳಿದ್ದು, ನೀರಿಗಿಳಿಯದೆಯೇ ಮೀನುಗಳನ್ನು ದಂಡೆಯ ಮೇಲಿಂದಲೇ ಬಾಚಿ ಹಿಡಿಯಲು ಇವು ಅನುಕೂಲವಾಗುವಂತಿರುವುದು.



ಪಶ್ಚಿಮ ಬಂಗಾಲ, ಅಸ್ಸಾಂ, ಸುಂದರಬನ ಹಾಗೂ ಒರಿಸ್ಸಾದ ಚಿಲ್ಕಾ ಸರೋವರಗಳ ಬಳಿಯ ಅರಣ್ಯ ಪ್ರದೇಶ, ನದಿತೀರ, ಕಾಂಡ್ಲವನಗಳ ಬಳಿ ವಾಸಿಸುವ ಇದನ್ನು ಕೇರಳದ ಅಳಿವೆಗಳ ಸಮೀಪದಲ್ಲೂ ಹಿನ್ನೀರಿನ ಕಾಲುವೆಗಳ ಆಸುಪಾಸಿನಲ್ಲೂ ಕಾಣಬಹುದು.

ಇದರ ಚಂದದ ಚರ್ಮಕ್ಕಾಗಿ ನಿರಂತರವಾಗಿ ಬೇಟೆಯಾಡುವುದರಿಂದಾಗಿ ಇಂದು ಮೀನುಗಾರ ಬೆಕ್ಕಿನ ಸಂತತಿ ತುಂಬಾ ಕ್ಷೀಣಿಸಿದೆ. ಸುಮಾರು 30–35 ಬೆಕ್ಕುಗಳ

ತುಪ್ಪಳದಿಂದ ಒಂದು ನಿಲುವಂಗಿಯನ್ನು ತಯಾರಿಸಬಹುದು. ಫ್ಯಾಶನ್ ಉಡುಪುಗಳಿಗೆಂದೇ ತುಪ್ಪಳಕ್ಕಾಗಿ ಬೇಟೆ ನಡೆಯುುವುದೇ ಈ ವಿಶಿಷ್ಟ ಬೆಕ್ಕಿನ ವಂಶ ನಿರ್ನಾಮವಾಗುವ ಹಂತಕ್ಕೆ ಬರಲು ಕಾರಣವೆಂದು ಹೇಳಬಹುದು.

**ಅಮೃತಶಿಲೆಯ ಬೆಕ್ಕು**

*(ಮಾರ್ಬ್‌ಲ್ಡ್ ಕ್ಯಾಟ್) Felis Marmorata Charltoni* Gray

ಮನೆ ಬೆಕ್ಕಿಗಿಂತ ತುಸು ದೊಡ್ಡದಾದ ಇದು ಮೇಲ್ನೋಟಕ್ಕೆ ಹೆಚ್ಚುಕಮ್ಮಿ 'ಹೊಗೆ ಚಿರತೆ'ಯನ್ನೇ ಹೋಲುತ್ತದೆ. ಅಮೃತಶಿಲೆ ಅಥವಾ ಸಂಗಮವರಿ ಕಲ್ಲಿನಂಥ ಮೈಬಣ್ಣ; ನಸುಗಂದು ಅಥವಾ ದಟ್ಟ ಕೇದಿಗೆ ಬಣ್ಣದ ತುಪ್ಪಳ; ಮೇಲಿನಿಂದ ಕೆಳಕ್ಕೆ ಅಡ್ಡಾದಿಡ್ಡಿಯೆಂದೇ ಹೇಳಬಹುದಾದ ದೊಡ್ಡ ದೊಡ್ಡ ಮಚ್ಚೆಗಳು ಇದರ ಪ್ರಮುಖ ಚಹರೆ.



ಅಮೃತಶಿಲೆಯ ಬೆಕ್ಕು ದಾರ್ಜಿಲಿಂಗ್, ಸಿಕ್ಕಿಂ, ನಾಗಾಲ್ಯಾಂಡ್‌ನಲ್ಲಿ ಹಾಗೂ ಈಶಾನ್ಯ ಭಾರತದ ಇತರೆಡೆಗಳಲ್ಲಿ ನೋಡಸಿಗುತ್ತವೆ. ಇದೂ ಚಿಕ್ಕ ಪುಟ್ಟ ಸ್ತನಿಪ್ರಾಣಿಗಳನ್ನು ಹಾಗೂ ಹಕ್ಕಿ ಪಕ್ಷಿಗಳನ್ನು ಬೇಟೆಯಾಡುತ್ತದೆ.

**ಕರಾಕಲ್**

*Felis caracal schmitzi* Matschie

ಮನೆ ಬೆಕ್ಕಿಗಿಂತ ದೊಡ್ಡದಾದ ಈ ಪ್ರಾಣಿಗೆ ಎದ್ದು ಕಾಣುವಂತ ಕಿವಿಗಳಿವೆ. ತ್ರಿಕೋನಾಕೃತಿಯ ಚೂಪಾದ ಕಿವಿಗಳ ತುದಿಗೆ ಕಪ್ಪು ರೋಮಗಳು ಹೊರಚಾಚಿರುತ್ತವೆ. ಉದ್ದ ಕಾಲುಗಳ, ಗಿಡ್ಡ ಬಾಲದ ಕರಾಕಲ್‌ನ ಮೈಬಣ್ಣ

ಸಮನಾಗಿ ನಸುಗಂದು. ಹೊಟ್ಟೆಯ ಒಳಭಾಗ ಬೆಳ್ಳಗಿರುತ್ತದೆ. ಮಧ್ಯ ಭಾರತ ಹಾಗೂ ವಾಯವ್ಯ ಪ್ರಾಂತಗಳ ಅರೆಶುಷ್ಕ ಅಥವಾ ಮರುಭೂಮಿಯಂಥ ಪ್ರದೇಶಗಳಲ್ಲಿ ಇದು ಕುರುಚಲು ಗಿಡಗಂಟಿಗಳ ಮಧ್ಯೆ ವಾಸಿಸುತ್ತದೆ. ಇದು ಮಹಾ ಚುರುಕಿನ ಪ್ರಾಣಿಯಾಗಿದ್ದು ಛಂಗೆಂದು ಕುಪ್ಪಳಿಸಿ ಹಾರಾಟದಲ್ಲಿದ್ದ ಹಕ್ಕಿಯನ್ನೂ ಹಿಡಿಯುತ್ತದೆ. ಹಕ್ಕಿ ಪಕ್ಷಿಗಳನ್ನಲ್ಲದೆ ಸಣ್ಣಪುಟ್ಟ ಸ್ತನಿಗಳನ್ನೂ ಇದು ಬೇಟೆಯಾಡುತ್ತದೆ.



## ಲಿಂಕ್ಸ್

*Felis lynx isabellina* Blyth

ಇದೂ ಚಿಕ್ಕ ಬಾಲದ, ಉದ್ದ ಕಾಲುಗಳ ಕಾಡುಬೆಕ್ಕು. ಮುಖದ ಮೇಲೆ ಜೂಲು ಕೂದಲು; ಕಿವಿಗಳ ಮೇಲೆ ರೋಮದ ದೊಡ್ಡ ಗುಚ್ಛ; ಹಿಮದಲ್ಲಿ ನಡೆಯಲು ಅನುಕೂಲವಾಗುವಂತೆ ಕಾಲಿನ ಪಾದಕ್ಕೆ ದಪ್ಪ ಹೊರಸು – ಇವು ಇದರ ಪ್ರಮುಖ ಲಕ್ಷಣಗಳು.



ಮೈಬಣ್ಣ ನಸುಕಂದಿನಿಂದ ಹಿಡಿದು ಬೂದು ಬಣ್ಣದವರೆಗೆ ಯಾವುದೂ

ಇರಬಹುದು. ಅಪರೂಪಕ್ಕೆ ದೊಡ್ಡ ಕಂದು ಮಚ್ಚೆಗಳನ್ನೂ ವಿಶೇಷವಾಗಿ ಕಾಲು ಮತ್ತು ಕಿಬ್ಬೊಟ್ಟೆಯ ಪಕ್ಕದಲ್ಲಿ ಕಾಣಬಹುದು.

ಎತ್ತರದ ಪರ್ವತಗಳಲ್ಲಿ ಗಿಡಗಂಟಿ, ಹುಲ್ಲು ದರ್ಭೆಗಳ ದಟ್ಟ ಹಾಸಿನ ಮಧ್ಯೆ ಬದುಕುವ ಇದನ್ನು ಬಲಿಷ್ಠ ಗಾತ್ರದ ಬೆಕ್ಕೆಂದೇ ಹೇಳಬಹುದು. ಮರ ಏರಬಲ್ಲ, ನೀರಲ್ಲಿ ಈಜಬಲ್ಲ ಚಾಣಾಕ್ಷತೆ ಇದಕ್ಕಿದೆಯಾದರೂ, ಬೇಟೆ ಮಾತ್ರ ನೆಲದ ಮೇಲೇ. ಹಕ್ಕಿಪಕ್ಷಿಗಳನ್ನೂ ಸ್ತನಿಗಳನ್ನೂ ಹಿಡಿಯುವ ಇದು ಕೆಲವು ಬಾರಿ ಆಡು ಕುರಿಗಳನ್ನೂ ಬೇಟೆಯಾಡುತ್ತದೆ. ಭೂಮಿಯ ಉತ್ತರ ಗೋಲಾರ್ಧದ ಹಲವೆಡೆ ವಾಸಿಸುವ ಇದು ಸಾಕಷ್ಟು ಸಂಖ್ಯೆಯಲ್ಲಿ ಉತ್ತರ ಅಮೆರಿಕಾ, ಕೆನಡಾ, ಯುರೋಪ್‌ಗಳಲ್ಲೂ ನೋಡಸಿಗುತ್ತದೆ. ಭಾರತದಲ್ಲಿ ಇದು ಜಮ್ಮು ಮತ್ತು ಕಾಶ್ಮೀರಕ್ಕೆ ಮಾತ್ರ ಸೀಮಿತವಾಗಿದೆ.

ಸಾಮಾನ್ಯವಾಗಿ ಒಂಟಿಯಾಗಿಯೇ ತಿರುಗಾಡುವ ಲಿಂಕ್ಸ್ ಕೆಲವೊಮ್ಮೆ ಸಂಗಾತಿಗಳನ್ನು ಜತೆಗಿಟ್ಟುಕೊಂಡು ಬೇಟೆಯಾಡುವುದೂ ಇದೆ. ಬಿದ್ದ ಮರಗಳ ಸಂದಿನಲ್ಲಿ ಅಥವಾ ಪೊಟರೆಯಲ್ಲಿ, ಇಲ್ಲವೆ ದೊಡ್ಡ ಬಂಡೆಯ ಸಂದಿನಲ್ಲಿ ಇದು ವಾಸ್ತವ್ಯ ಹೂಡುತ್ತದೆ. ಹೆಣ್ಣು ಲಿಂಕ್ಸ್ ಎರಡರಿಂದ ನಾಲ್ಕು ಮರಿಗಳನ್ನು ಹಾಕುತ್ತದೆ.

ಇದರ ಸುಂದರ ತುಪ್ಪಳಕ್ಕಾಗಿ ಬೇಟೆಯಾಡುವ ಮಂದಿ ಹೆಚ್ಚಾಗಿದ್ದರಿಂದ ಭಾರತದ ಮಟ್ಟಿಗೆ ಲಿಂಕ್ಸ್ ಅಪರೂಪವಾಗುತ್ತಿದೆ.

## ಶ್ವಾನ ಕುಟುಂಬ

ತೋಳ, ನರಿ, ಸೀಳುನಾಯಿ ಹಾಗೂ ಸಾಕು ನಾಯಿ ಇವೆಲ್ಲವೂ ಶ್ವಾನ ಕುಟುಂಬದಲ್ಲಿ *(ಕ್ಯಾನಿಡೆ)* ಬರುತ್ತವೆ. ಇವೆಲ್ಲವುಗಳ ಮುಖ್ಯ ಲಕ್ಷಣಗಳೆಂದರೆ: ಚೂಪು ಮೂತಿ, ನೇರ ಸೆಟೆದ ಕಿವಿಗಳು, ಗುಂಡನ್ನ ತಲೆ, ಉಬ್ಬು ಎದೆಯ ಕಟ್ಟುಮಸ್ತಾದ ಶರೀರ, ಜೂಲು ಬಾಲ, ನೀಳ ಕಾಲುಗಳು ಮತ್ತು ಒಳಕ್ಕೆಳೆಯಲಾಗದ ಪಂಜಗಳು. ಬೇಟೆಯ ಅಗತ್ಯಕ್ಕೆ ಅನುಗುಣವಾಗಿ ಇವುಗಳ ಶರೀರ ರಚನೆಯಿದೆ. ಬಹಳಷ್ಟು ಶ್ವಾನ ಜಾತಿಯ ಪ್ರಾಣಿಗಳು ಮೂಲತಃ ಬೇಟೆಗಾರ ಪ್ರಾಣಿಗಳೇ ಆಗಿದ್ದರೂ, ಕೆಲವು ಮಾತ್ರ ಸತ್ತ ಪ್ರಾಣಿಗಳನ್ನು ತಿನ್ನುವ ಪರೋಪಜೀವಿಗಳಾಗಿವೆ. ಆವಾಸದ ನಾಶ ಹಾಗೂ ಮಾನವ ಹಸ್ತಕ್ಷೇಪದಿಂದಾಗಿ ಶ್ವಾನಕುಲದ ಹಲವು ವನ್ಯಪ್ರಾಣಿಗಳು ಇಂದು ಅಪರೂಪವಾಗಿದ್ದು, ಅವನತಿಯ ಸರಹದ್ದಿಗೆ ಬಂದಿವೆ.

### ತೋಳ

*Canis lupus* Linnaeus

ಭಾರತದ ತೋಳಗಳು ಸುಮಾರು ಆಲ್ಸೇಶಿಯನ್ ನಾಯಿಗಳಷ್ಟಿರುತ್ತವೆ. ಮರಳಿನ ಬಣ್ಣದ, ಕೆಲವು ಬಾರಿ ಕಂದುಮಿಶ್ರಿತ ತುಪ್ಪಳ; ಬಿಳಿ ಕಿಬ್ಬೊಟ್ಟೆ; ನಸುಗೆಂಪು ಮುಖ ಮತ್ತು ಕಾಲುಗಳು. ಇತರ ಲಕ್ಷಣಗಳೆಂದರೆ ದೊಡ್ಡ ತಲೆಬುರುಡೆ, ನೀಳ ಮತ್ತು ಬಲಿಷ್ಠ ದವಡೆ ಹಾಗೂ ಎತ್ತರದ ಹಣೆ.

ತೋಳಗಳ ಸಂತಾನದ ಮಟ್ಟಿಗೆ ಹೇಳುವುದಾದರೆ, ಭಾರತದಲ್ಲಿ ಇವುಗಳ ಎರಡು ಚಿಕ್ಕ ಗಾತ್ರದ ತಳಿಗಳಿವೆ – ಕಾಶ್ಮೀರ ಹಿಮಾಲಯದ ಉಣ್ಣೆಗೂದಲಿನ ತೋಳ ಮತ್ತು ದಕ್ಷಿಣದ ಮಾಮೂಲು'ಭಾರತೀಯ ತೋಳ'.



ತೋಳಗಳು ನಿಶಾಚರಿಗಳು. ಜಿಂಕೆ, ಆಡು, ಕುರಿ ಮತ್ತು ಕೋಳಿಗಳನ್ನು ಇವು ಬೇಟೆಯಾಡುತ್ತವೆ. ಹಿಂದೊಂದು ಕಾಲದಲ್ಲಿ ಭಾರತದ ಎಲ್ಲೆಡೆ ಕಾಣಬಹುದಾಗಿದ್ದ ಈ ಪ್ರಾಣಿಯ ಸಂಖ್ಯೆ ಈಗ ಹಠಾತ್ತಾಗಿ ಇಳಿದಿದೆ. ತೋಳಗಳ ಚಿಕ್ಕಪುಟ್ಟ ಹಿಂಡುಗಳನ್ನು ಅಪರೂಪಕ್ಕೆ ಈಗ ಕರ್ನಾಟಕ, ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನ, ಬಿಹಾರ ಮತ್ತು ಕಚ್ಛದ ರಣದಲ್ಲಿ ಕಾಣಬಹುದು. ವರ್ಷ ಕಳೆದಂತೆಲ್ಲ ಅವುಗಳ ಬದುಕುಳಿಯುವ ಸಾಧ್ಯತೆ ಕ್ಷೀಣವಾಗುತ್ತ ನಡೆದಿದೆ. ವಿಧಿಯ ಕ್ರೂರ ಮುಷ್ಟಿಯಿಂದ ಪಾರಾಗಿ ಬದುಕಬಹುದಾದ ಎರಡು ಅಂಶಗಳೆಂದರೆ – ಅವು ಏನನ್ನಾದರೂ ತಿಂದು ಹಸಿವೆ ಹಿಂಗಿಸಿಕೊಳ್ಳುತ್ತವೆ; ಮತ್ತೆ ಅವು ಅನೇಕ ಮರಿಗಳಿಗೆ ಜನ್ಮ ನೀಡುತ್ತವೆ. ಹೆಣ್ಣು ತೋಳ ಒಂದೊಂದು ಬಾರಿಗೆ ಆರರಿಂದ ಹತ್ತು ಮರಿಗಳಿಗೆ ಜನ್ಮ ಕೊಟ್ಟು, ಆ ಒಂದೊಂದನ್ನು ತುಂಬ ಜಾಗರೂಕತೆಯಿಂದ ಬೆಳೆಸುತ್ತದೆ. ಹಾಗೂ ಅವು ಬದುಕುಳಿಯಬಹುದು; ಒಟ್ಟಾಗಿ ಹಿಂಡಿನಲ್ಲಿ ಒಂದಾಗಿ ಬಾಳುವುದರಿಂದಲೂ ಅವು ತಮ್ಮ ಅವಸಾನದ ದಿನಗಳನ್ನು ಮುಂದೂಡಬಹುದು. ಹಿಂಡಿನ ಮುಖ್ಯಸ್ಥನ ಜತೆ ಒಟ್ಟಾಗಿ ಅವು ಬೇಟೆಗೆ ಹೊರಡುತ್ತವೆ. ಇಷ್ಟೆಲ್ಲ ಅನುಕೂಲತೆಗಳಿದ್ದರೂ ಅವುಗಳ ಅವನತಿಗೆ ಮುಖ್ಯ ಕಾರಣ ಏನೆಂದರೆ, ತೋಳಗಳು ಮಕ್ಕಳನ್ನು ಎತ್ತೊಯ್ಯುತ್ತವೆ ಎಂಬ ಭೀತಿ ಅನೇಕರಲ್ಲಿ ಮನೆಮಾಡಿದೆ. ಅಲ್ಲದೆ ಮನುಷ್ಯನ ಆವಾಸವಿದ್ದಲ್ಲೆಲ್ಲ ಆಸುಪಾಸಿನಲ್ಲಿ ತೋಳಗಳನ್ನು ಕಂಡಲ್ಲಿ ಕೊಲ್ಲುವ ಪರಿಪಾಠ ಬೆಳೆದು ಬಂದಿದೆ.

**ಭಾರತದ ನರಿ**

*Vulpes bengalensis* (Shaw)

ಚಾಣಾಕ್ಷತೆ, ಕಪಟ, ವಂಚನೆಗಳೇ ಮುಂತಾದ ಅನೇಕ ಗುಣಗಳು ನರಿಗಳಿಗಿವೆಯೆಂದು ಮಕ್ಕಳ ಕತೆಯಲ್ಲಿ, ಪಂಚತಂತ್ರದಲ್ಲಿ ಪ್ರಚಲಿತವಾಗಿದೆ. ಅವು ಚಾಣಾಕ್ಷ ನಿಜ. ವೈರಿಗಳಿಂದ ಬಚಾವಾಗಲು ಹಾಗೂ ಬೇಟೆಯನ್ನು ಹಿಡಿಯಲು ಅವು ವಿಧವಿಧದ ಉಪಾಯಗಳನ್ನು ಹೂಡುತ್ತವೆ. ಒಂಟಿಯಾಗಿ ಇಲ್ಲವೆ ಇನ್ನೊಂದರ ಜತೆಗೂಡಿ ರಾತ್ರಿ ವೇಳೆ ಅವು ಬೇಟೆಗೆ ಹೊರಡುತ್ತವೆ, ಹಗಲು ವೇಳೆ ನಿದ್ರಿಸುತ್ತವೆ. ವಾಸನೆಯ ಮೂಲಕ, ಇಲ್ಲವೆ ಊಳಿಡುವ ಮೂಲಕ ಅವು ಪರಸ್ಪರ ಸಂಪರ್ಕ ಇಟ್ಟುಕೊಂಡಿರುತ್ತವೆ.



ಭಾರತದ ನರಿ ಬೂದು ಬಣ್ಣದ್ದಾಗಿದ್ದು ಸಣಕಲು ಕೈಕಾಲು ಮತ್ತು ತ್ರಿಕೋನಾಕೃತಿಯ ಕಿವಿಯನ್ನು ಪಡೆದಿದೆ. ಬಾಲದ ತುದಿ ಕಪ್ಪಗಿರುತ್ತದೆ. ವಾಯುವ್ಯದ ಸರಹದ್ದನ್ನು ಬಿಟ್ಟರೆ ಇಡೀ ಭಾರತದ ಎಲ್ಲೆಡೆ ನರಿಗಳು ನೋಡಸಿಗುತ್ತವೆ. ಸಾಗುವಳಿ ಜಮೀನು ಹಾಗೂ ಅದಕ್ಕೆ ಹೊಂದಿದ ಕುರುಚಲು ಕಾಡು ಅವುಗಳ ವಾಸಸ್ಥಾನ. ಇಲಿ, ಏಡಿ, ಹಾವು, ಓತಿ, ಗೆದ್ದಲು, ಹಣ್ಣು ಹಂಪಲುಗಳು ಹೀಗೆ ಏನನ್ನಾದರೂ ತಿನ್ನುತ್ತವೆ. ಇಷ್ಟಿದ್ದರೂ ಇವುಗಳ ಸಂತತಿ ಕ್ಷೀಣಿಸುತ್ತಿದೆ. ಮಾಂಸಕ್ಕಾಗಿ, ಚರ್ಮಕ್ಕಾಗಿ ಇವುಗಳ ಬೇಟೆಯಾಡುತ್ತಾರೆ. ಸಾಲದ್ದಕ್ಕೆ ಹೊಲಗದ್ದೆಗಳಲ್ಲಿ ಕೀಟನಾಶಕಗಳ ಬಳಕೆ ಹೆಚ್ಚಾಗಿರುವುದು ಇವುಗಳಿಗೆ ಮಾರಕವಾಗಿದೆ.

**ಸೀಳುನಾಯಿ**

*(ಇಂಡಿಯನ್ ವೈಲ್ಡ್ ಡಾಗ್) Cuon alpinus* (Pallas)

ಸಾಕು ನಾಯಿಗಳಿಗೂ ಭಾರತೀಯ ಕಾಡುನಾಯಿ (ಸೀಳುನಾಯಿ)ಗಳಿಗೂ ತುಂಬ ಹೋಲಿಕೆ ಇದೆ. ಸೀಳುನಾಯಿಯ ಮೈಬಣ್ಣ ಏಕರೂಪವಾಗಿ ಕಂದುಗೆಂಪಿನದಾಗಿದ್ದು, ಹೊಟ್ಟೆಯ ಒಳಮಗ್ಗುಲಲ್ಲಿ ಮಾತ್ರ ಹಳದಿ ಬಿಳಿ ಛಾಯೆ ಕಾಣುತ್ತದೆ. ಇದರ ಚಿಕ್ಕ

ಬಾಲದ ತುದಿ ಭಾಗದಲ್ಲಿ ದಟ್ಟ ಕೂದಲಿನ ಕಪ್ಪು ಮತ್ತು ಬೂದು ವರ್ಣದ ಜೂಲು ಇರುತ್ತದೆ.



ಕುಟುಂಬದ ಸದಸ್ಯರೆಲ್ಲರ ಜತೆ ಒಂದೇ ಹಿಂಡಿನಲ್ಲಿ ಸೀಳುನಾಯಿ ವಾಸಿಸುತ್ತದೆ. ದೊಡ್ಡ ಪ್ರಾಣಿಯ ಬೇಟೆಗೆ ಹೊರಡುವಾಗ ಮಾತ್ರ ಅಪರೂಪಕ್ಕೆ ಬೇರೆ ಬೇರೆ ಹಿಂಡುಗಳು ಒಂದಾಗುತ್ತವೆ. ಇವುಗಳ ದಾಳಿಗೆ ಹಂದಿ, ಸಾಂಬಾರ್, ನೀಲಗಾಯ್, ಕೃಷ್ಣಮೃಗಗಳೂ ಬಲಿಯಾಗುತ್ತವೆ. ಸಂಖ್ಯಾಬಲದಿಂದಲೇ ಇವು ಕಾಡುಕೋಣದ ಮೇಲೂ, ಹುಲಿ ಚಿರತೆಗಳ ಮೇಲೂ ದಾಳಿಯಿಡುತ್ತವೆ.

## ಕರಡಿಗಳು

ಕರಡಿಗಳ ಸಾಲಿನಲ್ಲಿ ದೊಡ್ಡಗಾತ್ರದ ನೆಲವಾಸಿಗಳಷ್ಟೇ ಅಲ್ಲ, ಮಾಂಸಾಹಾರಿಗಳೂ ಮರದ ಮೇಲೇ ವಾಸಿಸುವ ರಕ್ಕೂನ್‌ನಂಥ ಚಿಕ್ಕಪುಟ್ಟ ಪ್ರಾಣಿಗಳೂ ಬರುತ್ತವೆ. ಎಲ್ಲ ಕರಡಿಗಳ ಸಾಮಾನ್ಯ ಲಕ್ಷಣವೆಂದರೆ, ದಟ್ಟ ರೋಮಗಳ ದಪ್ಪ ತುಪ್ಪಳ ಹಾಗೂ ಮೊಂಡು ಬಾಲ. ಅವುಗಳ ಅಸ್ಥಿಪಂಜರವೂ ದೊಡ್ಡ ಗಾತ್ರದ್ದೇ. ಕೈಕಾಲುಗಳು ಬಲಿಷ್ಠವಾಗಿದ್ದು, ನೆಲ ಅಗೆಯಲಿಕ್ಕೆ ಹಾಗೂ ಕುಸ್ತಿ ಆಡಲಿಕ್ಕೆ ಅನುಕೂಲವಾಗುವಂಥ ಶಕ್ತಿಶಾಲಿ ಪಂಜಗಳಿರುತ್ತವೆ. ಕರಡಿ ತೊನೆಯುತ್ತ ನಡೆಯುತ್ತದೆ. ಇಡೀ ಪಾದವನ್ನು ನೆಲಕ್ಕೆ ಊರಿ ನಡೆಯುತ್ತದಾದ್ದರಿಂದ ಮನುಷ್ಯರ ಹೆಜ್ಜೆಯಂಥದೇ ಗುರುತನ್ನು ಮೂಡಿಸುತ್ತದೆ.

ಸಾಮಾನ್ಯವಾಗಿ ಕರಡಿಗಳು ನಿಧಾನಗತಿಯಲ್ಲಿ ಚಲಿಸುತ್ತವಾದರೂ, ಅಗತ್ಯಬಿದ್ದಾಗ ನಾಗಾಲೋಟ ಕೂಡ ಮಾಡಬಹುದು. ಕಪ್ಪುಕರಡಿ ತಾಸಿಗೆ 40 ಕಿಲೋಮೀಟರ್ ವೇಗದಲ್ಲಿ ಓಡಬಲ್ಲದು. ಕಂದು ಕರಡಿಯ ನಡಿಗೆ

ವಿಶಿಷ್ಟವಾದುದು. ಒಂದು ಬಾರಿಗೆ ಎಡಮಗ್ಗುಲಿನ ಎರಡೂ ಕಾಲುಗಳನ್ನು ಮತ್ತೊಂದು ಬಾರಿಗೆ ಬಲಮಗ್ಗುಲಿನ ಎರಡೂ ಕಾಲುಗಳನ್ನೂ ಎತ್ತಿ ಇಡುತ್ತ ಜೋಲಿ ಹೊಡೆಯುತ್ತ ಸಾಗುತ್ತದೆ. ಎಂಥ ಏರುಮಾರ್ಗವಾದರೂ ಎಲ್ಲೂ ನಿಲ್ಲದೆ, ಎರಡು ಕಿಲೋಮೀಟರ್ ದೂರದವರೆಗೆ ಓಡುವ ಸಾಮರ್ಥ್ಯ ಇದಕ್ಕಿದೆ.

ಕರಡಿಗಳಿರುವ ತಾಣವನ್ನು ಗುರುತಿಸುವುದು ಸುಲಭ. ಅವು ಓಡಾಡುವ ಹಾದಿಯ ಬಳಿ ಯಾವುದೇ ಮರಕ್ಕಾದರೂ 'ಕರಡಿಯ ಛಾಪು' ಬಿದ್ದಿರುತ್ತದೆ. ಮರಕ್ಕೆ ಪದೇ ಪದೇ ಕರಡಿ ಮೈಯನ್ನು ಉಜ್ಜುವ ಕಾರಣ ಮರದ ಬೊಡ್ಡೆ ನುಣುಪಾಗಿರುತ್ತದೆ. ಕೆಲವೆಡೆ, ಬೊಡ್ಡೆಗೆ ಗಾಯವಾಗಿದ್ದಲ್ಲಿ ಕರಡಿಯ ರೋಮಗಳೂ ಕಂಡುಬರಬಹುದು. ಕರಡಿಯ ಹಲ್ಲು ಮತ್ತು ಉಗುರಿನ ಗೀರುಗಳಾದ ಭಾಗಗಳಲ್ಲಿ ಕಾಂಡದ ರಸ ಜಿನುಗಿ ಒಣಗಿರುವುದನ್ನೂ ಕಾಣಬಹುದು. ಹಲ್ಲಿನ ಆಳ ಗೀರುಗಳಿದ್ದಲ್ಲಿ ಕಾಂಡದ ತಿರುಳು ಹೊರಕ್ಕೆ ಬಂದಿರುವುದನ್ನೂ ಕಾಣಬಹುದು.

ಕರಡಿಗಳಿರುವ ಪ್ರದೇಶಗಳ ಪತ್ತೆಗೆ ಇನ್ನೂ ಅನೇಕ ಬಗೆಯ ಗುರುತುಗಳಿರುತ್ತವೆ. ಅದು ಆಹಾರ ಹುಡುಕಿದಲ್ಲೆಲ್ಲ ಒಂದಲ್ಲ ಒಂದು ಕುರುಹು ಇದ್ದೇ ಇರುತ್ತದೆ. ನೆಲದ ಅಳಿಲುಗಳ ಸುರಂಗದ್ವಾರವನ್ನು ಕೆದಕಿದ್ದು, ಇರುವ ಹುತ್ತವನ್ನು ಒಡೆದುಹಾಕಿದ್ದು; ದುಂಬಿಗಳನ್ನೂ ಗೆದ್ದಲನ್ನೂ ಹುಡುಕಲೆಂದು ದಿಮ್ಮಿಗಳನ್ನು ಉರುಳಿಸಿದ್ದು, ಬಂಡೆಗಳನ್ನು ಮಗುಚಿಹಾಕಿದ್ದು; ಗಡ್ಡೆಗೆಣಸುಗಳನ್ನು ಅಗೆಯಲೆಂದು ಗಿಡಗಂಟಿಗಳನ್ನು ಕಿತ್ತು ಬೀಳಿಸಿದ್ದು, ಜೇನು ಹುಡುಕಲೆಂದು ಟೊಳ್ಳು ಬೊಡ್ಡೆಗಳನ್ನು ಸೀಳಿದ್ದು; ಇವೆಲ್ಲವೂ ಕರಡಿಯ ಕೃತ್ಯಗಳೆಂದೇ ನಿಸ್ಸಂಶಯವಾಗಿ ಹೇಳಬಹುದು. ತಿಂದು ಮಿಕ್ಕುಳಿದಿದ್ದನ್ನು ಮಣ್ಣು, ಕಲ್ಲು, ತೊಗಟೆ, ತರಗೆಲೆಗಳಿಂದ ಮುಚ್ಚಿಟ್ಟು ಹೋಗುವ ಅಭ್ಯಾಸ ಇವುಗಳಿಗಿರುವುದರಿಂದ ಅಂಥ ಖಜಾನೆಯ ಪತ್ತೆಯಾದಾಗೆಲ್ಲ ಕರಡಿ ಅಲ್ಲೇ ಎಲ್ಲೋ ಸಮೀಪದಲ್ಲೇ ಇದೆಯೆಂಬುದನ್ನು ಊಹಿಸಬಹುದಾಗಿದೆ.

## ಹಿಮಾಲಯದ ಕಂದು ಕರಡಿ

*Ursus aractos isabellinus* Horsfield

ಹೆಸರಿಗೆ ತಕ್ಕಂತೆ ಹಿಮಾಲಯದ ಕಂದು ಕರಡಿಯನ್ನು ಅದರ ಕಂದು ಕೂದಲಿನ ತುಪ್ಪಳದಿಂದಲೇ (ವರ್ಣಚಿತ್ರ – 7) ಗುರುತಿಸಬಹುದು. ಚಳಿಗಾಲದಲ್ಲಿ ಈ ತುಪ್ಪಳದ ಹೊದಿಕೆ ದಪ್ಪನಾಗಿ, ಒರಟೊರಟಾಗಿರುತ್ತದೆ. ಬೇಸಿಗೆಯಲ್ಲಿ ಇದೇ ತುಪ್ಪಳದ ರೋಮ ಗಿಡ್ಡವಾಗಿ, ಇನ್ನೂ ದಟ್ಟ ಕಪ್ಪಾಗಿ ಕಾಣುತ್ತದೆ. ಈ ಕರಡಿಗಳ ಮೈಬಣ್ಣದಲ್ಲಿ ಕೊಂಚ ವ್ಯತ್ಯಾಸ ಕಂಡುಬರಬಹುದು. ಕಂದು ಬಣ್ಣದಿಂದ ಹಿಡಿದು ಕೆಂಪು ಕಂದಿನವರೆಗೂ, ಇತ್ತ ಬೂದುಬಣ್ಣದಿಂದ ಹಿಡಿದು ಬೆಳ್ಳಿ ಮಿರುಗಿನವರೆಗೂ ಅಷ್ಟಿಷ್ಟು ವ್ಯತ್ಯಾಸ ಇದ್ದೇ ಇರುತ್ತದೆ. ಹಿಮಾಲಯದ ಅತಿ ಎತ್ತರ ಪ್ರದೇಶದಲ್ಲಿ – ಅಂದರೆ ಗಿಡಮರಗಳ ಸೀಮೆ ದಾಟಿ, ಶಾಶ್ವತ ಹಿಮ ಇರುವ ಸೀಮೆಯವರೆಗೂ ವಾಯುವ್ಯದಿಂದ ಹಿಡಿದು ಮಧ್ಯ ಹಿಮಾಲಯದವರೆಗೂ ಇವುಗಳ ವಾಸಸ್ಥಾನವಿದೆ.

ಹಣ್ಣುಹಂಪಲು, ಇಲಿ ಹೆಗ್ಗಣ, ಕೀಟಪತಂಗ, ಅಪರೂಪಕ್ಕೆ ದೊಡ್ಡ ಪ್ರಾಣಿಗಳನ್ನೂ ಇದು ತಿನ್ನುತ್ತದೆ.

### ಸೋಮಾರಿ ಕರಡಿ

*(ಸ್ಲಾಥ್ ಬೇರ್)* *Melursus ursinus* (Shaw)

ಇದಕ್ಕೂ ಒರಟೊರಟಾದ ಉದ್ದನ ಕಪ್ಪು ಕೂದಲು ಇದೆ. (ವರ್ಣಚಿತ್ರ – 8)ಆದರೆ ಎದೆಯ ಮೇಲೆ V ಆಕಾರದ ಬಿಳಿಯ ಪಟ್ಟೆಯನ್ನು ಕಾಣಬಹುದು. ಅಗಲವಾದ ತಲೆಯ ಮುಂದೆ ಉದ್ದ ಮೂತಿ ಇರುವುದರಿಂದ ಇಡೀ ರುಂಡಭಾಗ ತ್ರಿಕೋನಾಕಾರ ಕಾಣಿಸುತ್ತದೆ. ಕಾಲು ಕೊಂಚ ಬಾಗಿದಂತಿದ್ದು ಮುಂದಿನ ಕಾಲುಗಳ ಪಾದದ ಪಂಜಗಳು ಬಿಳಿ ಬಣ್ಣದ್ದಾಗಿರುತ್ತವೆ. ಇದರ ಹೆಜ್ಜೆ ಗುರುತುಗಳು ಮನುಷ್ಯನ ಹೆಜ್ಜೆ ಗುರುತನ್ನೇ ಹೋಲುತ್ತವೆ.

ಭಾರತದ ಎಲ್ಲೆಡೆ ಈ ಕರಡಿಗಳನ್ನು ಕಾಣಬಹುದು. ನೀರಿನ ತಡಿಯಲ್ಲಿ, ಅರಣ್ಯದ ಆಸುಪಾಸಿನ ಕಲ್ಲುಬಂಡೆಗಳಲ್ಲಿ ಇವು ವಾಸಿಸುತ್ತವೆ. ಊಟ ಅರಸುತ್ತ ರಾತ್ರಿ ಹೊತ್ತು ಅಲೆಯುವ ಇವು ಹಣ್ಣು, ಹೂ, ಗಡ್ಡೆ ಗೆಣಸು, ಜೇನು, ಗೆದ್ದಲು, ಪಕ್ಷಿ, ಮೊಟ್ಟೆ, ಏನೆಲ್ಲ ತಿನ್ನುತ್ತವೆ.

## ಸಿವೆಟ್‌ಗಳು

ಬೆಕ್ಕು ಮತ್ತು ಮುಂಗುಸಿಗಳ ಮಧ್ಯಂತರದಲ್ಲಿರುವ ಈ ಪ್ರಾಣಿಗಳು *ವಿವೆರಿಡೇ* ಕುಲಕ್ಕೆ ಸೇರಿವೆ. ಬೆಕ್ಕಿಗೆ ಕೊಂಚ ಸನಿಹವೆಂದೇ ಹೇಳಬಹುದು. ಉದ್ದ ಶರೀರ, ಗಿಡ್ಡ ಕಾಲು, ಉದ್ದನ್ನ ಮುಖ ಹಾಗೂ ನೀಳವಾದ ಮೂತಿ – ಇವು ಸಿವೆಟ್‌ನ ಮುಖ್ಯ ಲಕ್ಷಣಗಳು. ಇದರ ಕಣ್ಣು ಚುರುಕು; ವಾಸನೆ ಶಕ್ತಿ ಕೂಡಾ ಚುರುಕು. ಶ್ರವಣಶಕ್ತಿಯೂ ಅನುಪಮವಾದುದು. ಅವು ಅಪ್ಪಟ ಮಾಂಸಾಹಾರಿಗಳೇನಲ್ಲ. ಬೇರೇನೂ ಸಿಗದಿದ್ದಾಗ ಶಾಕಾಹಾರವನ್ನೇ ಅವಲಂಬಿಸುತ್ತವೆ.

### ಮಲಬಾರ್ ಸಿವೆಟ್

*Viverra megaspila* Blyth

ದೊಡ್ಡ ಮುಂಗುಸಿಯ ಗಾತ್ರದ ಈ ಪ್ರಾಣಿಗೆ ಹಳದಿ ಮೈ ಬಣ್ಣ ಇದೆ. ಶರೀರದ ಹಿಂಭಾಗದಲ್ಲಿ ದೊಡ್ಡ ಕಂದು ಮಚ್ಚೆಗಳಿವೆ. ಬಾಲದ ಮೇಲೆ ಆರು ಕರೀ ಉಂಗುರಗಳಿವೆ. ಕುತ್ತಿಗೆಯ ಎರಡೂ ಕಡೆ ಕಾಲರ್‌ನಂಥ ಕಪ್ಪು ಪಟ್ಟೆಗಳಿವೆ. ಮೀನುಗಾರ ಬೆಕ್ಕಿನ ಹಾಗೆ ಇದಕ್ಕೂ ಬೆರಳುಗಳ ಮಧ್ಯೆ ಜಾಲಪಾದಗಳಿವೆ. ಮಲಬಾರ್ ಸಿವೆಟ್‌ನ ವಿಶೇಷ ಲಕ್ಷಣವೆಂದರೆ ಕುತ್ತಿಗೆಯಿಂದ ಹಿಡಿದು, ಬೆನ್ನಿನಗುಂಟ ಬಾಲದವರೆಗೂ ನಿಮಿರಿ ನಿಂತ ಕೂದಲುಗಳ ಒಂದು ಉದ್ದ ಪಟ್ಟೆ. ಚಿಕ್ಕಪುಟ್ಟ ಸ್ತನಿಪ್ರಾಣಿ ಮತ್ತು ಪಕ್ಷಿಗಳನ್ನು ಬೇಟೆಯಾಡುವ ಇದನ್ನು ಕೋಳಿ ಸಾಕಣೆದಾರರ ಪರಮವೈರಿ ಎಂದೇ ಪರಿಗಣಿಸಲಾಗುತ್ತಿದೆ.

ಇದು ಎಲ್ಲೆಡೆ ಸುಲಭದಲ್ಲಿ ಕಾಣಸಿಗುವ ಪ್ರಾಣಿಯಲ್ಲ. ಹಿಂದೊಂದು ಕಾಲದಲ್ಲಿ ಕೇರಳದಲ್ಲಿ ಅದರಲ್ಲೂ ವಿಶೇಷವಾಗಿ ಮಲಬಾರ ಪಟ್ಟಿ ಗುಂಟ ಸಾಮಾನ್ಯವಾಗಿ ನೋಡಬಹುದಾಗಿದ್ದ ಈ ಪ್ರಾಣಿ ಇಂದು ತೀರ ವಿರಳವಾಗಿದೆ.

**ಚುಕ್ಕಿ ಲಿನ್‌ಸ್ಯಾಂಗ್**

*(ಸ್ಪಾಟೆಡ್ ಲಿನ್‌ಸಾಂಗ್) Prionodon pardicolor* Hodgson

ಗಿಡ್ಡ ಕೂದಲಿನ, ಬೂದುಬಣ್ಣದ ಈ ಪ್ರಾಣಿಗೆ ಮೈಮೇಲೆಲ್ಲ ಚುಕ್ಕಿಗಳಿವೆ. ಉದ್ದ ಶರೀರದ ಲಿನ್‌ಸ್ಯಾಂಗ್ ಬಹುಚಾಲೂಕಿನ ಬೇಟೆಗಾರ ಹಾಗೂ ಮರ ಹತ್ತುವಲ್ಲಿ ನಿಷ್ಣಾತ. ಚೂಪುತಲೆಯ ಕುಳ್ಳನ್ನ ಕಾಲಿನ ಈ ಪ್ರಾಣಿಯ ಬಾಲದ ಮೇಲೆ ಎಂಟು ಹತ್ತು ಉಂಗುರಗಳಿವೆ. ಇದರ ಮೈಮೇಲಿನ ಚುಕ್ಕಿಗಳು ಶರೀರದ ಉದ್ದಕ್ಕೂ ಸಾಲಾಗಿ ಜೋಡಿಸಿದಂತಿದ್ದು, ಕುತ್ತಿಗೆ ಮತ್ತು ಕಾಲುಗಳ ಬಳಿ ಅವು ನಿರಂತರ ಗೆರೆಗಳಾಗಿ ಮಾರ್ಪಟ್ಟಿವೆ.



ಮಧ್ಯ ಮತ್ತು ಪೂರ್ವದ ಹಿಮಾಲಯದ ಬೆಟ್ಟಗಳ ಅರಣ್ಯದಲ್ಲಿ ವಾಸಿಸುವ ಲಿನ್‌ಸ್ಯಾಂಗ್ ಕ್ರಿಮಿಕೀಟ, ಹಕ್ಕಿ ಪಕ್ಷಿ ಹಾಗೂ ಚಿಕ್ಕಪುಟ್ಟ ಸ್ತನಿಗಳನ್ನೂ ಬೇಟೆಯಾಡುತ್ತದೆ. ಕಾಲನ್ನು ಮಡಚಿ, ಹೊಟ್ಟೆ ಹೊಸೆಯುತ್ತ ಹೋಗಿ ಇದು ತನ್ನ ಬೇಟೆಯನ್ನು ಹಿಡಿಯುತ್ತದೆ. ಇದರ ಚಪ್ಪಟೆ ನೀಳ ದೇಹವನ್ನು ನೋಡಿ ಅನೇಕರು ಇದೊಂದು ದಪ್ಪ ಹೊಟ್ಟೆಯ ವಿಷಾಕ್ತ ಹಾವೆಂದೇ ಪರಿಗಣಿಸುತ್ತಾರೆ.

**ಕರಡಿ ಬೆಕ್ಕು ಅಥವಾ ಬಿಂಟುರಾಂಗ್**

*Arctictis binturong* (Raffles)

ನೋಡಲು ಬೆಕ್ಕಿನಂತಿದ್ದರೂ ಇದರ ದಪ್ಪ ತುಪ್ಪಳ ಹಾಗೂ ಒರಟು ರೋಮಗಳಿಂದಾಗಿ ಕರಡಿಯೆಂದೇ ಭ್ರಮೆ ಮೂಡಿಸಬಲ್ಲ ಬಿಂಟುರಾಂಗ್‌ಗೆ 'ಕರಡಿ ಬೆಕ್ಕು' ಎಂದೂ ಕರೆಯುತ್ತಾರೆ. ದಟ್ಟ ಅರಣ್ಯದಲ್ಲಿ 2,000 ಮೀಟರ್ ಎತ್ತರದವರೆಗಿನ ಪರ್ವತ ಶ್ರೇಣಿಯಲ್ಲೂ ಇದು ವಾಸಿಸುತ್ತದೆ. ಕಪ್ಪು ತುಪ್ಪಳದ ಮೇಲೆ ಇದಕ್ಕೆ ಅಲ್ಲಲ್ಲಿ

ಬಿಳಿ ಅಥವಾ ಬೂದುಬಣ್ಣದ ರೋಮುಗಳಿವೆ. ಇದರ ಚಿಕ್ಕ ಕಿವಿಗಳ ಮೇಲೂ ಕರೀ ರೋಮುಗಳ ಗುಚ್ಛ ಇದೆ. ಸಣ್ಣ ಹಲ್ಲುಗಳ ದವಡೆ ಇದಕ್ಕಿದೆ.



ಬಿಂಟುರಾಂಗ್ ಮರಗಳ ಮೇಲೆ ವಾಸಿಸುತ್ತದೆ. ದಪ್ಪ ಬಾಲವೂ ಕೊಂಬೆಗಳನ್ನು ಬಿಗಿದಪ್ಪಬಲ್ಲ ವಿಶೇಷ ಕೈಗಳಾಗಿ ನೆರವಿಗೆ ಬರುತ್ತದೆ. ನಿಶಾಚರಿ ಯಾದ ಇದು ಹಗಲೆಲ್ಲ ಮರದ ಪೊಟರೆಯೊಳಗೆ ಬಾಲದ ಮಧ್ಯೆ ತಲೆಯನ್ನು ಹುದುಗಿಸಿ ನಿದ್ರಿಸುತ್ತಿರುತ್ತದೆ. ಸಂಜೆಗತ್ತಲಿನ ನಂತರ ಆಹಾರಕ್ಕಾಗಿ ಹೊರಬರುವ ಇದು ತನ್ನ ಹಲ್ಲುಗಳ ಮಧ್ಯೆ ಉಸಿರು ಬಿಡುತ್ತ 'ಹಿಸ್' ಎಂಬ ಧ್ವನಿ ಹೊರಡಿಸುತ್ತದೆಂದು ಹೇಳಲಾಗುತ್ತದೆ.

ಸಿಕ್ಕಿಂ ಮತ್ತು ಅಸ್ಸಾಂನ ಅರಣ್ಯಗಳಲ್ಲಿ ವಾಸಿಸುವ ಬಿಂಟುರಾಂಗ್ ಗಿಡಮರಗಳ ಚಾವಣಿಯ ಮೇಲೆ ನಿಧಾನಕ್ಕೆ ಆದರೆ ಚಾಕಚಕ್ಯತೆಯಿಂದ ಚಲಿಸುತ್ತದೆ. ಪಕ್ಷಿಗಳನ್ನೂ ಇತರ ಸಣ್ಣಪುಟ್ಟ ಸ್ತನಿಗಳನ್ನೂ ಹಿಡಿಯುವ ಇದು ಆಗಾಗ ನೆಲಕ್ಕಿಳಿದು ಎರೆಹುಳಗಳನ್ನೂ ಕೀಟ ಪತಂಗಗಳನ್ನೂ ಹಣ್ಣು ಹಂಪಲನ್ನೂ ಭಕ್ಷಿಸುತ್ತದೆ.

**ಕೆಂಪು ಪಾಂಡಾ**

*Ailurus fulgens* F Cuvier

ಕೆಂಪು ಪಾಂಡಾ (ವರ್ಣಚಿತ್ರ – 9)ಅಥವಾ ಕಿರಿಯ ಪಾಂಡಾ ಎಂಬ ಪ್ರಾಣಿ ಮರಗಳ ಮೇಲೆ ವಾಸಿಸುವ ನಿಶಾಚರಿ. ಬೆಕ್ಕಿನಂಥ, ಆದರೆ ಕರಡಿ ಕುಲಕ್ಕೆ ಸಮೀಪವರ್ತಿಯಾದ ಇದಕ್ಕೆ ಇಟ್ಟಿಗೆ ಕೆಂಪಿನ ದಪ್ಪ ಸುಂದರ ತುಪ್ಪಳವಿದೆ. ಗೋಲಾಕಾರದ ತಲೆ, ಬಿಳಿ ಮುಖ. ದಪ್ಪ ತುಪ್ಪಳದ ಬಾಲದ ಮೇಲೆ ತುಕ್ಕು ಕೆಂಪು ಹಾಗೂ ನಸುಗೆಂಪಿನ ಉಂಗುರಗಳಿದ್ದು, ಅದಕ್ಕೆ ಅಚ್ಚಕಪ್ಪಿನ ತುದಿ ಇದೆ.

ನೆಲದ ಮೇಲೆ ಇದು ಸೋಮಾರಿಯಂತೆ ಚಲಿಸುತ್ತದಾದರೂ ಕೆಂಪು ಪಾಂಡಾ ಸಲೀಸಾಗಿ ಸರಸರ ಮರ ಏರುತ್ತದೆ. ಹಿಮಾಲಯದ ಗುಂಟ ನೇಪಾಳ, ಸಿಕ್ಕಿಂ, ಮಯನ್ಮಾರ್ ಮೇಲ್ಭಾಗ ಹಾಗೂ ಚೀನಾದ ದಕ್ಷಿಣ ಪ್ರಾಂತಗಳಲ್ಲಿ ವಾಸಿಸುವ ಕೆಂಪು ಪಾಂಡಾ ಎಳೆ ಬಿದಿರನ್ನೂ, ಗೆಡ್ಡೆಗೆಣಸು – ಹಣ್ಣು ಹಂಪಲನ್ನೂ ಕ್ರಿಮಿಕೀಟಗಳನ್ನೂ ಹಕ್ಕಿಗಳ ಮೊಟ್ಟೆಯನ್ನೂ, ಅಪರೂಪಕ್ಕೆ ಚಿಕ್ಕಪುಟ್ಟ ಪ್ರಾಣಿಗಳನ್ನೂ ತಿನ್ನುತ್ತದೆ. ಹಿಡಿದಿಟ್ಟ ಪಾಂಡಾ ಬ್ರೆಡ್ಡು, ಹಾಲು, ಮೊಟ್ಟೆ ಮತ್ತು ಸಣ್ಣಪುಟ್ಟ ಹಕ್ಕಿಗಳನ್ನು

ಭಕ್ಷಿಸುತ್ತದೆ. ಇದರ ಕೆಲವು ಹವ್ಯಾಸಗಳು ಬೆಕ್ಕಿನಂತಿದ್ದು, ಇನ್ನು ಕೆಲವು ಕರಡಿಯನ್ನು ಹೋಲುತ್ತವೆ. ಬೆಕ್ಕಿನಂತೆ ಹಿಸ್ಸೆನ್ನುತ್ತದೆ. ಕರಡಿಯಂತೆ ಗುರ‍್ರೆನ್ನುತ್ತದೆ, ನಾಯಿಯಂತೆ ನೆಗೆಯುತ್ತದೆ. ಕರಡಿಯಂತೆ ಮೂತಿಯನ್ನು ತೊರೆಯಲ್ಲಿ ಅದ್ದಿ ನೀರು ಹೀರುತ್ತದಾದರೂ ಬೆಕ್ಕಿನಂತೆ ತನ್ನ ಪಂಜನ್ನು ಭಾಗಶಃ ಹೊರಕ್ಕೆ ಚಾಚಬಹುದಾಗಿದೆ.

### ಇರುವೆ ಭಕ್ಷಕ ಚಿಪ್ಪುಹಂದಿ

*(ದಿ ಇಂಡಿಯನ್ ಪ್ಯಾಂಗೋಲಿನ್) Manis crassicaudata* Gray

ಇರುವೆ ಭಕ್ಷಕ ಪ್ಯಾಂಗೋಲಿನ್ (ವರ್ಣಚಿತ್ರ – 10)ತುಂಬ ಕುತೂಹಲಕಾರಿ ಪ್ರಾಣಿ. ಇತರ ಸ್ತನಿ ಪ್ರಾಣಿಗಳಲ್ಲಿ ಕಂಡುಬರದ ರಕ್ಷಾಕವಚ ಇದಕ್ಕಿದೆ. ಒಂದರ ಮೇಲೊಂದು ಹೇರಿಕೊಂಡಂತೆ ಕಾಣುವ ಚಿಕ್ಕ ಚಿಕ್ಕ ಚಿಪ್ಪುಗಳು ಇದರ ಇಡೀ ಶರೀರವನ್ನೂ ಬಾಲವನ್ನೂ ಮುಚ್ಚಿರುತ್ತವೆ. ಇತರ ಸ್ತನಿಗಳಿಗೆ ಮೈಮೇಲೆ ಇರುವ ಕೂದಲು ಅಥವಾ ಮುಳ್ಳುಗಳೇ ಈ ಪ್ರಾಣಿಯು ಮಟ್ಟಿಗೆ ಚಿಪ್ಪುಗಳಾಗಿ ಪರಿವರ್ತಿತಗೊಂಡಿವೆ ಎಂದು ಪರಿಗಣಿಸಲಾಗಿದೆ. ಇದರ ತಳಭಾಗದಲ್ಲಿ ಹೊಟ್ಟೆಯ ಮೇಲೆ ಅಲ್ಲಲ್ಲಿ ಚಿಪ್ಪುಗಳ ಸಂದಿನಲ್ಲಿ ಕೂದಲಿನಂಥ ಒರಟು ನಾರುಗಳಿವೆ. ಇರುವೆ ಭಕ್ಷಕ ಪ್ರಾಣಿಯ ಇನ್ನೊಂದು ವೈಶಿಷ್ಟ್ಯವೆಂದರೆ, ಇದು ಗಾಬರಿಗೊಂಡಾಗ ಚಿಪ್ಪಿನ ಚೆಂಡಿನಂತೆ ಮುದುರಿಕೊಳ್ಳುತ್ತದೆ. ಹೀಗಿದ್ದಾಗ ಅದನ್ನು ಬಿಡಿಸಲು ದುಸ್ಸಾಧ್ಯವೆಂಬಷ್ಟರ ಮಟ್ಟಿಗೆ ಇದರ ಸ್ನಾಯುಗಳು ಬಲಿಷ್ಠವಾಗಿವೆ.

ಮುಂಗಾಲುಗಳಿಗಿಂತ ಉದ್ದವೆನ್ನಬಹುದಾದಷ್ಟು ನೀಳವಾದ ಇಕ್ಕಳದಂಥ ಮೊಂಡು ಉಗುರುಗಳಿಂದ ಇದು ಹುತ್ತಗಳನ್ನು ಕೆದಕಿ ಇರುವೆ ಮತ್ತು ಗೆದ್ದಲುಗಳನ್ನು ಹೆಕ್ಕಿ ತಿನ್ನುತ್ತದೆ. ಸಾಮಾನ್ಯವಾಗಿ ಬಿಲದಲ್ಲಿ ವಾಸಿಸುವ ಇದು ಇರುವೆಗಳ ಬೇಟೆಗಾಗಿ ಮರವನ್ನೂ ಏರಬಲ್ಲದು. ಮರ ಏರುವಾಗ ಬಾಲವನ್ನು ಮುಷ್ಟಿಯಂತೆ ಬಳಸಿ ಬಿಗಿದುಕೊಳ್ಳುತ್ತದೆ.

ಭಾರತೀಯ ಚಿಪ್ಪುಹಂದಿಯನ್ನು ಬಯಲು ಪ್ರಾಂತಗಳಲ್ಲೂ, ಹಿಮಾಲಯದ ಇಳಿಜಾರು ಪ್ರದೇಶಗಳಲ್ಲೂ ಕಾಣಬಹುದು. ಪ್ಯಾಂಗೋಲಿನ್‌ನ ಇನ್ನೊಂದು ಪ್ರಭೇದಕ್ಕೆ ಚೀನೀ ಪ್ಯಾಂಗೊಲಿನ್ ಎನ್ನುತ್ತಾರೆ. ***(Marris penctadactyla aurita Hodgson).*** ಇದು ಪೂರ್ವ ಹಿಮಾಲಯ ಮತ್ತು ಅಸ್ಸಾಂಗಳಲ್ಲಿ ಕಂಡುಬರುತ್ತದೆ. ಪ್ಯಾಂಗೊಲಿನ್‌ನ ಶರೀರದಲ್ಲಿ ಔಷಧೀಯ ಗುಣಗಳಿವೆ ಎಂಬ ಮೂಢನಂಬಿಕೆ ಪ್ರಚಲಿತದಲ್ಲಿದೆ. ಬೇಟೆ ಹಾಗೂ ಆವಾಸದ ನಾಶದಿಂದಾಗಿ ಇದರ ಸಂಖ್ಯೆಯೂ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗುತ್ತಿದೆ.

## ಶಾಕಾಹಾರಿ ಪ್ರಾಣಿಗಳು

ಆನೆ, ಘೇಂಡಾ, ಚಮರೀಮೃಗ (ಯಾಕ್), ಕಾಟಿ ಹಾಗೂ ಜಿಂಕೆ ಜಾತಿಯ ಬಗೆಬಗೆಯ ಸಸ್ಯಾಹಾರಿ ಪ್ರಾಣಿಗಳು ಭಾರತದಲ್ಲಿವೆ. ಎಷ್ಟೆಲ್ಲ ಬಗೆಯ ಸಸ್ಯಗಳನ್ನು ಭಕ್ಷಿಸುತ್ತ, ವಿವಿಧ ಭೂಪ್ರದೇಶಗಳಲ್ಲಿ ವಾಸಿಸುವ ಇವು ಗಾತ್ರ, ಆಕಾರಗಳಲ್ಲೂ

ವೈವಿಧ್ಯಮಯವಾಗಿವೆ. ಇವುಗಳ ದಂತಪಂಕ್ತಿ ಮತ್ತು ಜೀರ್ಣಾಂಗಗಳು ಸಸ್ಯ ಭಕ್ಷಣೆಗೆಂದೇ ವಿಶಿಷ್ಟವಾಗಿ ರೂಪುಗೊಂಡಿವೆ.

## ಏಷ್ಯಾದ ಆನೆ

*Elephas maximus* (Linnaeus)

ನೆಲವಾಸಿಗಳಲ್ಲಿ ಅತಿ ದೊಡ್ಡ ಪ್ರಾಣಿಗಳೆಂದರೆ ಆಫ್ರಿಕ ಮತ್ತು ಏಷ್ಯದಲ್ಲಿ ಮಾತ್ರ ಕಂಡುಬರುವ ಆನೆಗಳು. (ವರ್ಣಚಿತ್ರ. – 12)ಮೇಲ್ತುಟಿಯೇ ಉದ್ದನ ಸೊಂಡಿಲಾಗಿ ಮಾರ್ಪಟ್ಟಿರುವುದು ಈ ಪ್ರಾಣಿಯ ವೈಶಿಷ್ಟ್ಯ. ಇದು ಅದರ ಬಲಿಷ್ಠ ಅಂಗವೂ ಹೌದು. ಆನೆಯ ಪೂರ್ವಜರಿಗೆ ಈ ಮೇಲ್ತುಟಿ ಕೇವಲ ಚೋಟುದ್ದದ, ಹಂದಿಮೂತಿಯಂಥ ಅಂಗವಾಗಿತ್ತು. ಅದೇ ನೀಳವಾಗುತ್ತ ಈಗ ವಿವಿಧ ಉದ್ದೇಶಗಳಿಗೆ ಬಳಕೆಯಾಗುವ ಕೈಗಳಂತೆ ಅದೇ ಸೊಂಡಿಲಾಗಿ ರೂಪುಗೊಂಡಿದೆ. ಬೇರೆ ಪ್ರಾಣಿಗಳು ತಮ್ಮ ಮೂಗಿನ ಹೊರಳೆಗಳನ್ನು ಅತ್ತಿತ್ತ ತಿರುಗಿಸಲು ಬಳಸುವ ಸ್ನಾಯುಗಳೇ ಆನೆಗಳಲ್ಲಿ ಇನ್ನು ಶಕ್ತಿಶಾಲಿಯಾಗಿ ಸೊಂಡಿಲಿನ ಚಲನೆಗೆ ಅನುವು ಮಾಡಿಕೊಟ್ಟಿವೆ. ಆದ್ದರಿಂದ ಆನೆಗಳು ಸೊಂಡಿಲನ್ನು ನೆಲದತ್ತ ಇಳಿಬಿಟ್ಟಷ್ಟೇ ಸಲೀಸಾಗಿ ಅತ್ತಿತ್ತ, ಮೇಲೆ, ಕೆಳಗೆ, ಸುರುಳಿಯಾಗಿ, ನೇರವಾಗಿ ತಿರುಗಿಸಬಹುದಾಗಿದೆ.

ಸೊಂಡಿಲನ್ನು ಆನೆ ತರಹೇವಾರಿ ಕೆಲಸಗಳಿಗೆ ಬಳಸಿಕೊಳ್ಳುತ್ತದೆ. ಉದಾಹರಣೆಗೆ, ನೀರನ್ನು ಮೇಲಕ್ಕೆಳೆದುಕೊಳ್ಳಬಹುದು. ಆದರೆ ಅನೇಕರು ಭಾವಿಸಿದಂತೆ, ಆನೆ ಸೊಂಡಿಲಿನಿಂದ ನೀರನ್ನು ಕುಡಿಯುವುದಿಲ್ಲ. ಬಾಯೊಳಕ್ಕೆ ನೀರನ್ನು ಪಿಚಕಾರಿಯ ಹಾಗೆ ತೂರಿಸಲು ಸೊಂಡಿಲಿನ ಬಳಕೆಯಾಗುತ್ತದೆ ಅಷ್ಟೆ. ಆಹಾರವನ್ನೂ ಬಾಯಿಗೆ ಎತ್ತಿ ಒಯ್ಯಲಿಕ್ಕೆ ಹಾಗೂ ಹುಲ್ಲನ್ನೂ, ಗಿಡಗಳ ಟೊಂಗೆಯನ್ನೂ ಕಿತ್ತು ಎತ್ತಲಿಕ್ಕೆ ಸೊಂಡಿಲು ಸಹಾಯಕಾರಿ. ಚಿಗುರೆಲೆ ಆನೆಗೆ ತುಂಬಾ ಇಷ್ಟ. ಎಷ್ಟೋ ಬಾರಿ ಎತ್ತರದ ಟೊಂಗೆಗಳ ತುದಿಭಾಗದ ಚಿಗುರೆಲೆ ಇದಕ್ಕೆ ಎಟುಕದಿದ್ದಾಗ, ಸಲೀಸಾಗಿ ಇಡೀ ಗಿಡವನ್ನೇ ಹಣೆಯಿಂದ ಒತ್ತಿ ಬೀಳಿಸಿ ತನ್ನ ಮೇವನ್ನು ಭಕ್ಷಿಸುತ್ತದೆ.

ಸೊಂಡಿಲನ್ನು ಇದು ತನ್ನ ಐದನೇ ಕೈಕಾಲಾಗಿ ಬಳಸುತ್ತದೆ. ಒಮ್ಮೆಲೇ 400–500 ಕಿಲೊಗ್ರಾಮ್ ತೂಕದ ವಸ್ತುಗಳನ್ನೂ ಎತ್ತುವ ತಾಕತ್ತು ಇದಕ್ಕಿದೆ. ಅತಿ ಭಾರವಾದ ದಿಮ್ಮಿಯನ್ನೂ ಇದು ಎತ್ತಿ ದಂತಗಳ ಮಧ್ಯೆ ಸಮತೋಲವಾಗಿ ಮಲಗಿಸಿ ಸೊಂಡಿಲನ್ನು ಅದರ ಮೇಲೆ ಒತ್ತಿಹಿಡಿದು ಆನೆ ಚಲಿಸುತ್ತದೆ.

ಸೊಂಡಿಲು ಬಲಶಾಲಿಯಷ್ಟೇ ಅಲ್ಲ, ಆನೆಯ ಅತ್ಯಂತ ನಾಜೂಕಿನ ಅಂಗವೂ ಹೌದು. ಇದರ ತುದಿಯಲ್ಲಿರುವ ಎರಡು ಹೊರಳೆಗಳು ಸಂವೇದನಶೀಲವಾಗಿದ್ದು ವಾಸನೆಯ ಗ್ರಹಣದ ಕೆಲಸ ಮಾಡುತ್ತವೆ. ಇತರೆಲ್ಲ ಪ್ರಾಣಿಗಳ ಹಾಗೆ ಆನೆಗೂ ಘ್ರಾಣಶಕ್ತಿ ತುಂಬ ಮಹತ್ವದ್ದಾಗಿದ್ದು ಅತಿ ಸೂಕ್ಷ್ಮ ಮಾಹಿತಿಗಳೂ ಅದರಿಂದ ಗೊತ್ತಾಗುತ್ತದೆ. ಗಾಳಿಯಲ್ಲಿನ ವಾಸನೆ ಹೀರುತ್ತ, ನೆಲದಲ್ಲಿನ ವೈಶಿಷ್ಟ್ಯಗಳನ್ನು ಗಮನಿಸುತ್ತ ಆನೆಗಳ ಸೊಂಡಿಲು ಸದಾಕಾಲ ಚಲನೆಯಲ್ಲಿರುತ್ತದೆ.

ಆನೆ ಸದಾ ಸಂಚಾರಿ. ಅನೇಕ ಬಾರಿ ಮುದಿ ಹೆಣ್ಣಾನೆಯ ನೇತೃತ್ವದಲ್ಲಿ ಹಲವು ಡಜನ್ ಆನೆಗಳು ಹಿಂಡುಹಿಂಡಾಗಿ ಸಂಚರಿಸುತ್ತವೆ. ಒಂದರ ಹಿಂದೊಂದರಂತೆ ಸಾಲಾಗಿ ಇವು ಮೇವು ಹುಡುಕುತ್ತ ತಾಸಿಗೆ 10 ಕಿಲೋಮೀಟರ್ ವೇಗದಲ್ಲಿ ಚಲಿಸುತ್ತವೆ. ಆನೆ ಕಟ್ಟಾ ಸಸ್ಯಾಹಾರಿ.

ವರ್ಷದ ಒಂದು ನಿರ್ದಿಷ್ಟ ಋತುವಿನಲ್ಲಿ ಆನೆಗೆ 'ಮಸ್ತಿ' ಬರುತ್ತದೆ. ಘಾಟು ವಾಸನೆಯ ಜಿಗುಟು ದ್ರವವೊಂದು ಆನೆಯ ಕಣ್ಣಿನ ಬಳಿ ಜಿನುಗುತ್ತದೆ. ಈ ಅವಧಿಯಲ್ಲಿ ಅದು ಸುಲಭವಾಗಿ ಸಿಟ್ಟಿಗೇಳುತ್ತದೆ. ಕ್ಷುಲ್ಲಕ ಕಾರಣಕ್ಕೂ ಕೆರಳುತ್ತದೆ. 'ಮಸ್ತಿ'ಯ ನಿಜವಾದ ಅರ್ಥ ಗೊತ್ತಿಲ್ಲವಾದರೂ, ಇದು ಒಂದು ಬಗೆಯ ಬೆದೆ ಎಂದೇ ಹೇಳಬಹುದು. ಈ ದಿನಗಳಲ್ಲಿ ಆನೆಗಳ ಲೈಂಗಿಕ ಚಟುವಟಿಕೆ ಚುರುಕಾಗಿರುತ್ತದಾದರೂ, ಇತರ ದಿನಗಳಲ್ಲೂ ಗಂಡಾನೆ ಹೆಣ್ಣಾನೆ ಕೂಡಿಕೊಳ್ಳುವುದೂ ಉಂಟು. ಹೆಣ್ಣಾನೆ ಗರ್ಭಿಣಿಯಾಗಿ 21 ತಿಂಗಳ ನಂತರ ಒಂದು ಮರಿಗೆ ಜನ್ಮ ನೀಡುತ್ತದೆ. ಹೆರಿಗೆಗೆ ಕೊಂಚ ಮುಂಚೆ ಹಾಗೂ ನಂತರ ಇತರ ಹೆಣ್ಣಾನೆಗಳೂ ಗರ್ಭಿಣಿಯ ಪ್ರಸವಕಾರ್ಯದಲ್ಲಿ ನೆರವಾಗುತ್ತವೆ. ಬರ್ಮೀಯರು ಇಂಥ ನೆರವಿನ ಹೆಣ್ಣಾನೆಗಳಿಗೆ 'ಆಂಟಿ' (ಸೂಲಗಿತ್ತಿ) ಎನ್ನುತ್ತಾರೆ.

ಅದೇ ತಾನೆ ಹುಟ್ಟಿದ ಮರಿಯಾನೆ ಸುಮಾರು 100 ಕಿಲೋ ತೂಕದ್ದಿದ್ದು ಒಂದು ಮೀಟರ್ ಎತ್ತರವಿರುತ್ತದೆ. ಆಗಲೇ ಅದಕ್ಕೆ ಮೈಮೇಲೆ ರೋಮಗಳಿರುತ್ತವೆ. ತಾಯಿಯ ಮುಂಗಾಲುಗಳ ಮಧ್ಯೆ ಇರುವ ಜೋಡಿ ಮೊಲೆಯ ಕೆಚ್ಚಲಿನಿಂದ ಹಾಲು ಹೀರುತ್ತವೆ. ಭಾರತದಲ್ಲಿ ಗಂಡಾನೆಗಳಿಗೆ ಮಾತ್ರ ಕೊಂಬುಗಳು ಬೆಳೆಯುತ್ತವೆ. ಆಫ್ರಿಕದ ಆನೆಗಳು ನಮ್ಮ ಆನೆಗಿಂತ ಎತ್ತರ ಮತ್ತು ಬಲಿಷ್ಠವಾಗಿದ್ದು ಅವುಗಳ ಕಿವಿಯೂ ದೊಡ್ಡದಾಗಿ ಬೆಳೆದಿರುತ್ತವೆ. ದಂತಗಳನ್ನು ಆನೆಗಳು ಆಯುಧವಾಗಿಯೂ ಬಳಸುತ್ತವೆ.

ಹುಲ್ಲು, ಗಿಡಗಂಟಿ, ಬೇರು, ಟೊಂಗೆಗಳೇ ಆನೆಯ ಮುಖ್ಯ ಆಹಾರ. ಭಾರತದ ಆನೆಗಳು ಸಾಮಾನ್ಯವಾಗಿ ಬಿದಿರು ಮತ್ತು ಎತ್ತರದ ಹುಲ್ಲುಗಳಿರುವ ಕಾಡುಗಳಲ್ಲಿ ವಾಸಿಸುತ್ತವೆ. ಐದು ಟನ್ (4,700 ಕಿಲೋ) ತೂಕದ, 8 ರಿಂದ 10 ಅಡಿ ಎತ್ತರವಿರುವ ಆನೆಗಳಿಗೆ ಪ್ರತಿದಿನ 150 ಕಿಲೊ ಮೇವು ಬೇಕು.

ಸಹಸ್ರಾರು ವರ್ಷಗಳಿಂದ ಆನೆಗಳನ್ನು ವಿಧವಿಧದ ಕೆಲಸಕಾರ್ಯಗಳಿಗಾಗಿ ಮನುಷ್ಯರು ಪಳಗಿಸಿಕೊಂಡಿದ್ದಾರೆ. ಇಂದಿಗೂ ದೊಡ್ಡ ದಿಮ್ಮಿಗಳ ಸಾಗಾಟಕ್ಕೆ ಆನೆಗಳ ಬಳಕೆಯಾಗುತ್ತದೆ. ಸರ್ಕಸ್‌ಗಳಿಗಂತೂ ಆನೆ ಬೇಕೆ ಬೇಕು. ದಂತಗಳ ಕಳ್ಳಬೇಟೆಗಾಗಿ ಪ್ರತಿವರ್ಷವೂ ಮನುಷ್ಯರು ಸತತವಾಗಿ ಆನೆಗಳನ್ನು ಕೊಲ್ಲುತ್ತಲೇ ಬಂದಿದ್ದಾರೆ. ಇಂದು ಕೇರಳ, ಕರ್ನಾಟಕ, ಒರಿಸ್ಸಾ, ಬಿಹಾರ, ಉತ್ತರ ಪ್ರದೇಶ, ಅಸ್ಸಾಂಗಳಲ್ಲಿ ಆನೆಗಳ ರಕ್ಷಣೆಗೆ ಅಭಯಾರಣ್ಯಗಳನ್ನೂ ರಾಷ್ಟ್ರೀಯ ವನ್ಯಧಾಮಗಳನ್ನೂ ಸೃಷ್ಟಿಸಲಾಗಿದೆ. 'ಪ್ರೊಜೆಕ್ಟ್ ಎಲಿಫೆಂಟ್' ಎಂಬ ಹೆಸರಿನ ಆನೆ ಸಂರಕ್ಷಣಾ ಯೋಜನೆಯೂ ಕಾರ್ಯರೂಪಕ್ಕೆ ಬರುತ್ತಿದೆ.

## ಒಂಟಿ ಕೊಂಬಿನ ಮಹಾಘೇಂಡಾ

*(ದಿ ಗ್ರೇಟ್ ವನ್ ಹಾರ್ನ್‌ಡ್ ರೈನೊಸಿರೋಸ್)*

*Rhinoceros unicornis* Linnaeus

ಜಗತ್ತಿನಲ್ಲಿ ಐದು ಬಗೆಯ ಘೇಂಡಾ ಮೃಗಗಳಲ್ಲಿ ಭಾರತ – ನೇಪಾಳದಲ್ಲಿ ವಾಸಿಸುವ ಒಂಟಿಕೊಂಬಿನ ಮಹಾ ಘೇಂಡಾ ಮೃಗವೇ ವಿನಾಶದ ಅಂಚಿನಲ್ಲಿದೆ. ಕಪ್ಪು ಘೇಂಡಾ, ಬಿಳಿ ಘೇಂಡಾಗಳೆಂಬ ಎರಡು ಆಮೆರಿಕದ ಪ್ರಭೇದಗಳು, ಸುಮಾತ್ರದ ಘೇಂಡಾ ಮತ್ತು ಜಾವಾದ ಒಂಟಿ ಕೊಂಬಿನ ಚಿಕ್ಕ ಘೇಂಡಾಗಳ ಸ್ಥಿತಿ ಅಷ್ಟೇನೂ ಶೋಚನೀಯವಾಗಿಲ್ಲ.



ಗಾತ್ರದಲ್ಲಿ ಆನೆಯ ನಂತರದ ಪ್ರಾಣಿಯೆಂದರೆ ಒಂಟಿಕೊಂಬಿನ ಮಹಾಘೇಂಡಾ. ಆರಡಿ ಎತ್ತರ, 12 ಅಡಿ ಉದ್ದದ ಇದು ಎರಡು ಟನ್ ತೂಕದಷ್ಟು ಬೆಳೆಯುತ್ತದೆ. ಕಪ್ಪು – ಬೂದ ಮೈಬಣ್ಣ; ಮೈಮೇಲೆಲ್ಲ ದಪ್ಪ ಕವಚಗಳಂತೆ ಕಾಣುವ ಒರಟು ಚರ್ಮ; ಭುಜ, ತೊಡೆ ಹಾಗೂ ಪೃಷ್ಠದ ಮೇಲೆ ಗಂಟುಗಳು; ಇವೆಲ್ಲವುಗಳಿಗಿಂತ ವಿಶಿಷ್ಟವಾಗಿ, ಮೂಗಿನ ತುದಿಗೆ (ಗಂಡು ಹೆಣ್ಣು ಎರಡಕ್ಕೂ) ಗೊರಸಿನಂಥ ಒಂದು ಕೊಂಬು. ಈ ಕೊಂಬು ಎರಡು ಅಡಿ ಉದ್ದದವರೆಗೆ ಬೆಳೆಯಬಹುದು. ಒರಟು ಕೂದಲೇ ಉಗುರಿನಂತೆ ಪರಿವರ್ತನೆಯಾಗಿ ಕೊಂಬಿನ ರೂಪದಲ್ಲಿ ಬೆಳೆದಿರುತ್ತದೆ. ಅನೇಕರ ನಂಬಿಕೆಗೆ ವ್ಯತಿರಿಕ್ತವಾಗಿ, ಈ ಕೊಂಬಿನಲ್ಲಿ ಎಂಥ ಔಷಧೀಯ ಗುಣವೂ ಇಲ್ಲ. ಆದರೆ ಇದೊಂದು ಮೂಢನಂಬಿಕೆಯಿಂದಾಗಿ, ಕೊಂಬಿನ ಕಳ್ಳಸಾಗಣೆದಾರರು ಘೇಂಡಾಗಳನ್ನು ಕೊಲ್ಲುತ್ತಾರೆ. ಅವುಗಳ ಸಂತತಿ ದಿನದಿನಕ್ಕೆ ಕ್ಷೀಣಿಸುವಂತೆ ಮಾಡುತ್ತಾರೆ.

ಒಂದು ಕಾಲದಲ್ಲಿ ಭಾರತೀಯ ಖಡ್ಗಮೃಗಗಳನ್ನು ಸಿಂಧೂನದಿಯಿಂದ ಹಿಡಿದು

ಬರ್ಮಾ (ಮಯನ್ಮಾರ್) ವರೆಗೂ ಕಾಣಬಹುದಿತ್ತು. ಇಂದು ಇವುಗಳ ವಾಸಕ್ಷೇತ್ರ ಕ್ಷೀಣಿಸಿದೆ. ಅಸ್ಸಾಂನ ಬ್ರಹ್ಮಪುತ್ರ ಕಣಿವೆ, ನೇಪಾಳದ ಚಿತವನ ಕಣಿವೆ ಹಾಗೂ ಪಶ್ಚಿಮ ಬಂಗಾಲದ ಎರಡು ಪುಟ್ಟ ವನ್ಯಧಾಮಗಳಲ್ಲಷ್ಟೇ ಖಡ್ಗಮೃಗಗಳು ಸೀಮಿತವಾಗಿವೆ. ಇಂದು ಬದುಕಿರುವ ಒಟ್ಟು 1,950 ಘೇಂಡಾಗಳಲ್ಲಿ 1,250 ಮೃಗಗಳು ಅಸ್ಸಾಂನ ಕಾಜಿರಂಗಾ ಅರಣ್ಯದಲ್ಲೂ 400 ಮೃಗಗಳು ನೇಪಾಳದಲ್ಲೂ ಇವೆ.

ಘೇಂಡಾಗಳು ಒಂಟಿಜೀವಿಗಳಾಗಿದ್ದು, ಜೀವಿತದ ಬಹುಪಾಲು ಅವಧಿಯನ್ನು ಕೆರೆ, ನದಿ, ಜಲಾಶಯಗಳ ನೀರಲ್ಲಿ ಕಳೆಯುತ್ತವೆ. ಅಲ್ಲಿನ ಜೊಂಡು ಹುಲ್ಲೇ ಅದಕ್ಕೆ ಪ್ರಮುಖ ಆಹಾರ. ಮೇಲೆದ್ದು ಬಂದಾಗ ಗಿಡಗಂಟೆಗಳನ್ನೂ ಹುಲ್ಲನ್ನೂ ತಿನ್ನುತ್ತವೆ.

ಅವುಗಳ ಹುಲ್ಲುಗಾವಲುಗಳನ್ನು ಮನುಷ್ಯರು ಅತಿಕ್ರಮಿಸಿದ್ದಾರೆ; ದನ ಮೇಯಿಸುವ ಗೋಮಾಳಗಳಾಗಿ ಅವು ಪರಿವರ್ತನೆಯಾಗಿವೆ. ವಾಸಕ್ಷೇತ್ರದ ನಾಶ ಹಾಗೂ ಕೊಂಬುಗಳ ಬೇಟೆಯಿಂದಾಗಿ ಇವುಗಳ ಸಂತತಿ ವಿರಳವಾಗುತ್ತಿದೆ. ಘೇಂಡಾಗಳ ಸಂರಕ್ಷಣೆಗೆ ಬಿಗಿಯಾದ ಕ್ರಮ ಕೈಗೊಂಡು, ಹಿಂದೆ ಅವು ವಾಸವಾಗಿದ್ದ ಕಡೆ ಮತ್ತೆ ಆಶ್ರಯಧಾಮ ನಿರ್ಮಿಸುವ ಯತ್ನಗಳು ನಡೆದಿವೆ. ದೂಧ್ವಾ ರಾಷ್ಟ್ರೀಯ ಉದ್ಯಾನದಲ್ಲಿ ಅವುಗಳನ್ನು ಬೆಳೆಸುವ ಯತ್ನ ಸಫಲವಾಗುತ್ತಿದೆ. ಘೇಂಡಾಗಳು ನಿರ್ವಂಶವಾಗುವುದನ್ನು ತಡೆಗಟ್ಟಲು ಸಾಧ್ಯವೆಂಬ ಭರವಸೆ ಮೂಡುತ್ತಿದೆ.

## ಏಷ್ಯಾದ ಕಾಡುಕತ್ತೆ

*(ಏಷ್ಯಾಟಿಕ್ ವೈಲ್ಡ್ ಆಸ್) Asinus hemionus khur* (Lesson)

ಊರ ಕತ್ತೆಗಳಿಗಿಂತ ದೊಡ್ಡದಾದ, ಆದರೆ ಕುದುರೆಗಳಿಗಿಂತ ಚಿಕ್ಕ ಗಾತ್ರದ ಕಾಡುಕತ್ತೆಗಳು ಕಚ್ಛದ ರಣದ ಅಂಚಿನಲ್ಲಿ ಕಂಡುಬರುತ್ತವೆ. ಬೂದು ಬಣ್ಣದ, ಇಲ್ಲವೆ ನಸುಗೆಂಪು ಬಣ್ಣದ ಈ ಪ್ರಾಣಿಗಳಿಗೆ ಎದೆ ಹಾಗೂ ಹೊಟ್ಟೆಯ ತಳಭಾಗದಲ್ಲಿ ಬಿಳಿ ಬಣ್ಣವಿರುತ್ತದೆ. ತಲೆಯಿಂದ ಹೊರಚಾಚಿದ ಚೂಪು ಕಿವಿಗಳು ದೊಡ್ಡ ಗಾತ್ರದ್ದಿದ್ದು, ತುದಿಯಲ್ಲಿ ಕಪ್ಪಾಗಿರುತ್ತವೆ. ಕಿವಿಯಿಂದ ಹಿಡಿದು, ಬೆನ್ನಿನಗುಂಟ ಬಾಲದವರೆಗೂ ದಟ್ಟ ಕಪ್ಪಿನ ಜೂಲುರೋಮಗಳ ಒಂದು ಗೆರೆ ಇದೆ. ಬಾಲದ ತುದಿಗೆ ಗೊಂಡೆ ಇದೆ.

ಮರುಭೂಮಿಯ ಲವಣಭರಿತ ಶುಷ್ಕ ಪ್ರದೇಶಗಳಲ್ಲಿ ಬೆಳೆಯುವ ಕುರುಚಲು ಗಿಡಗಂಟೆ, ಹುಲ್ಲು ಪಾಚಿಗಳನ್ನೂ, ಬೊಡ್ಡೆಯ ಮೇಲಿನ ಹಾವಸೆಗಳನ್ನೂ ತಿಂದು ಬದುಕುವ ಈ ಪ್ರಾಣಿಗಳು ಹಿಂದೊಂದು ಕಾಲದಲ್ಲಿ ಭಾರತದ ವಾಯುವ್ಯದ ವಿಸ್ತಾರ ಭೂಪ್ರದೇಶದಲ್ಲಿ ಹೇರಳ ಸಂಖ್ಯೆಯಲ್ಲಿದ್ದವು. ಸಾಕು ಪ್ರಾಣಿಗಳನ್ನು ಅತಿಯಾಗಿ ಮೇಯಿಸಿದ್ದರಿಂದ ಹುಲ್ಲು ಹಸಿರು ಕಡಿಮೆಯಾಗುತ್ತ ಬಂದಿದ್ದೂ, ದನಕುರಿಗಳ ಸಾಂಕ್ರಾಮಿಕ ರೋಗಗಳು ಇವಕ್ಕೆ ತಗುಲಿದ್ದೂ, ಇವೇ ಮೊದಲಾದ ಮಾನವ ಜನ್ಯ ಕಾರಣಗಳಿಂದಾಗಿ ಕಾಡು ಕತ್ತೆಗಳ ಸಂಖ್ಯೆ ಹಠಾತ್ತಾಗಿ ಕ್ಷೀಣಿಸಿದೆ.



ಏಷ್ಯದ ಈ ಕಾಡುಕತ್ತೆಗಳ ವಂಶಕ್ಕೇ ಸೇರಿದ ಇನ್ನೊಂದು ಪ್ರಾಣಿ 'ಕಿಯಾಂಗ್' ಅಥವಾ ಟಿಬೆಟನ್ ಕಾಡುಗತ್ತೆ. ಇದು ಕಚ್ಛದ ಕಾಡುಕತ್ತೆಗಳಿಗಿಂತ ದೊಡ್ಡದೂ, ದಟ್ಟವರ್ಣದ್ದೂ ಆಗಿದ್ದು ಟಿಬೆಟ್, ಲಡ್ಡಾಖ್ ಮತ್ತು ಸಿಕ್ಕಿಂಗಳಲ್ಲಿ ನೋಡಸಿಗುತ್ತದೆ.

**ಕಾಡು ಚಮರೀಮೃಗ**

*(ವೈಲ್ಡ್ ಯಾಕ್) Bos mutus* (Przewalski)



ಹಸುಗಳ ಹತ್ತಿರದ ಸಂಬಂಧಿಯಾದ ಯಾಕ್ ಪಶು ಹಸುಗಳಿಗಿಂತ ದೊಡ್ಡದೂ, ಬಲಿಷ್ಠವೂ ಆಗಿದೆ. ಹಿಮಾಲಯದ 20,000 ಅಡಿ (6,096 ಮೀಟರ್)ಗಿಂತ ಎತ್ತರದ ಚಳಿ ಪ್ರದೇಶದಲ್ಲಿ ಬದುಕುವ ಗಿಡ್ಡ ತಳಿಯು ಇದರ ಇಡೀ ದೇಹವೆಲ್ಲ

ಉದ್ದನ್ನ ಕಪ್ಪು ಕಂದು ಬಣ್ಣದ ಒರಟುಕೂದಲಿಂದ ತುಂಬಿದೆ. ಕಾಲುಗಳೂ ಚಿಕ್ಕವು. ಪೂರ್ತಿ ಬೆಳೆದ ಗಂಡು ಚಮರೀಮೃಗ 816 ಕಿಲೊ ತೂಗುತ್ತದೆ. ಹೆಣ್ಣು ಕೊಂಚ ಚಿಕ್ಕದು. ಅದರ ಕೋಡೂ ಚಿಕ್ಕದು. ಹಿಮಾಲಯದ ಹಿಮಭರಿತ ಪರಿಸರಕ್ಕೆ ಹೊಂದಿಕೊಂಡೇ ವಿಕಾಸವಾದ ಪ್ರಾಣಿ ಇದು.

ಕಾಲಿನಲ್ಲಿ ಹಿಮವನ್ನು ಕೆದಕುತ್ತ, ಮೂತಿಯಿಂದ ಹಿಮದ ಕೆಳಗಿನ ಹುಲ್ಲನ್ನು ಬಾಚಿ ಕಿತ್ತು ತಿನ್ನುವ ಯಾಕ್, ಹುಲ್ಲನ್ನಷ್ಟೇ ಅಲ್ಲ, ಕುರುಚಲು ಗಿಡಗಂಟಿಗಳನ್ನೂ ತಿನ್ನುತ್ತದೆ. ಕುಡಿಯಲು ನೀರು ಸಿಗದಿದ್ದಾಗ ಅದು ಹಿಮವನ್ನೇ ತಿನ್ನಬಹುದು. ಭಾರತದಲ್ಲಿ ಲಡ್ಡಾಖ್ ಮತ್ತು ಕುಮಾಂವ್ಞೊ ಪರ್ವತಗಳ ಉತ್ತರಭಾಗದಲ್ಲಿ ಕಾಡು ಯಾಕ್‌ಗಳು ನೋಡಸಿಗುತ್ತವೆ. ಅಲ್ಲಿನ ಗುಡ್ಡಗಾಡು ಜನರು ಶತಮಾನಗಳ ಹಿಂದೆಯೇ ಯಾಕ್ ಪಶುಗಳನ್ನು ಪಳಗಿಸಿ ಸಾಕುಪ್ರಾಣಿಯಾಗಿ ಮಾರ್ಪಡಿಸಿದ್ದಾರೆ. ಆದರೆ ಸಾಕಿದ ಯಾಕ್‌ಗಳು ಗಾತ್ರದಲ್ಲಿ ಕೊಂಚ ಸಣ್ಣ. ಅವುಗಳ ತುಪ್ಪಳದ ಮೇಲೆ ಬಿಳಿ ಮತ್ತು ಕೆಂಪಿನ ತೇಪೆಗಳಿರುತ್ತವೆ. ಜನಕ್ಕೆ ಹಾಲು, ಮಾಂಸ, ಚರ್ಮಗಳನ್ನು ಕೊಡುವ ಜತೆಗೇ ಯಾಕ್‌ಗಳು ದುಡಿಮೆಗೂ ಒಗ್ಗಿರುತ್ತವೆ.

**ಕಾಡುಕೋಣ, ಕಾಡೆಮ್ಮೆ**

*(ವೈಲ್ಡ್ ಬಫ್ಯಾಲೋ) Bubalus Bubalio* (Linnaeus)

ಸಾಕಿದ ಎಮ್ಮೆ ಕೋಣಗಳ ಪ್ರಭೇದದಂತೆಯೇ ಕಾಡಿನ ಎಮ್ಮೆ ಕೋಣಗಳೂ ಕಪ್ಪು ಇಲ್ಲವೆ ಬೂದು ಬಣ್ಣದ್ದಿರುತ್ತವೆ. (ವರ್ಣಚಿತ್ರ – 11) ಕೋಡುಗಳೂ ಅದೇ ರೀತಿ ಚಪ್ಪಟೆಯಾಗಿದ್ದು, ಹಿಮ್ಮೊಗ ಬಾಗಿ ಮೇಲೇರಿರುತ್ತವೆ. ಹೆಣ್ಣು ಗಂಡು ಎರಡಕ್ಕೂ ಕೋಡುಗಳಿರುತ್ತವೆ. ಕಾಲುಗಳು ಕೊಳೆ ಬಿಳಿ ಬಣ್ಣದ್ದು.

ಅಸ್ಸಾಂ, ಬ್ರಹ್ಮಪುತ್ರಾ, ಅರುಣಾಚಲ ಪ್ರದೇಶ, ಪಶ್ಚಿಮ ಒರಿಸ್ಸಾ, ಪೂರ್ವ ಮಹಾರಾಷ್ಟ್ರದ ಜವುಳು ಅರಣ್ಯಗಳಲ್ಲಿ ಇವು ವಾಸಿಸುತ್ತವೆ. ಹಗಲು ವೇಳೆಯಲ್ಲಿ ಇವು ಮಂದೆಗಳಲ್ಲಿ ಒಂದಾಗಿ ಹುಲ್ಲು ಮೇಯುತ್ತಲೋ, ಇಲ್ಲವೆ ಕೆರೆ ಹೊಂಡಗಳಲ್ಲಿ ಹೊರಳಾಡುತ್ತಲೋ ಇರುವುದನ್ನು ಕಾಣಬಹುದು. ನಮ್ಮ ಸಾಕು ಎಮ್ಮೆ ಕೋಣಗಳು ಈ ಪ್ರಭೇದದಿಂದಲೇ ಬಂದಿವೆ.

**ಕಾಟಿ**

*(ಗೌರ್ ಅಥವಾ ಇಂಡಿಯನ್ ಬೈಸನ್) Bos Gaurus* H. Smith

ಇದು ಭಾರೀ ಗಾತ್ರದ ಕಪ್ಪುಬಣ್ಣದ ಪ್ರಾಣಿ. (ವರ್ಣಚಿತ್ರ – 13) ಅಮೆರಿಕದ ಬೈಸನ್‌ಗಳಿಗೆ ಹೋಲಿಸಿದರೆ ಇವುಗಳ ಕಾಲು ಚಿಕ್ಕವಾಗಿದ್ದು ಬಿಳಿ ಬಣ್ಣದವಾಗಿರುತ್ತವೆ. ಚಿಕ್ಕ ರೋಮುಗಳು ದಟ್ಟ ಕಂದು ಇಲ್ಲವೆ ಕೇಸರಿ ಅಥವಾ ಕಪ್ಪು ಬಣ್ಣದ್ದಿರಬಹುದು. ಪುಟ್ಟ ಬಾಲದ ತುದಿಗೆ ಜೂಲು ಗೊಂಚಲಿರುತ್ತದೆ. ಗಂಡು, ಹೆಣ್ಣು ಎರಡಕ್ಕೂ ಎದ್ದು ಕಾಣುವ ಕೋಡುಗಳಿರುತ್ತವೆ.

ದಟ್ಟ ಅರಣ್ಯಗಳಲ್ಲಿ ಆರರಿಂದ ಹನ್ನೆರಡು ಕಾಟಿಗಳು ಗುಂಪಾಗಿ ಹುಲ್ಲು, ಬಿದಿರು,

ಚಿಗುರೆಲೆ, ಮರದ ತೊಗಟೆಗಳನ್ನು ತಿನ್ನುತ್ತ ಓಡಾಡುತ್ತವೆ. ಅರುಣಾಚಲ ಪ್ರದೇಶದಿಂದ ಹಿಡಿದು, ಪೂರ್ವ, ಮಧ್ಯ ಹಾಗೂ ದಕ್ಷಿಣ ಭಾರತದ ದಟ್ಟ ಉಷ್ಣವಲಯದ ಕಾಡುಗಳಲ್ಲಿ ಇವು ಕಂಡುಬರುತ್ತವೆ.

**ಜವುಳು ಜಿಂಕೆ**

*(ಸ್ವಾಂಪ್ ಡಿಯರ್) Cervus duvauceli* G. Cuvier

ಇದಕ್ಕೆ ಹಿಂದಿಯಲ್ಲಿ 'ಬಾರಾಸಿಂಘಾ' ಅಂದರೆ 'ಹನ್ನೆರಡು ಕೊಂಬಿನ ಜಿಂಕೆ' ಎನ್ನುತ್ತಾರೆ. ಅನೇಕ ಶಾಖೆಗಳಿರುವ ಕೊಂಬನ್ನು ಹೊತ್ತಿರುವ ಇದು ತುಂಬ ಸುಂದರ ಪ್ರಾಣಿ. ಇದಕ್ಕೆ ಉಣ್ಣೆಯ ಮನಮೋಹಕ ತುಪ್ಪಳವಿದ್ದು, ಮಿರಿ ಮಿರಿ ಮಿಂಚುತ್ತದೆ. ಬೇಸಿಗೆ ಕಾಲದಲ್ಲಿ ಇದರ ಮೈಬಣ್ಣ ಮಸುಕಾಗುತ್ತದೆ. ಇದರ ಕೊಂಬುಗಳು ಕಾಲಕಾಲಕ್ಕೆ ಕಳಚಿ ಬಿದ್ದು, ಅದೇ ಸ್ಥಳದಲ್ಲಿ ಹೊಸ ಕೊಂಬುಗಳು ಮೊಳೆಯುತ್ತವೆ. ಅದು ಕೊಂಬಿನಂತಿರದೆ ಮಖಮಲ್ಲಿನ ಮೃದುವಾದ ಕವಚದಿಂದ ಆವರಿಸಿರುತ್ತದೆ. ಅದು ಬೆಳೆದ ಮೇಲೆ, ಮರಿಗಳಾಗುವ ಋತುಗಳಲ್ಲಿ ಈ ಮೃದುವಾದ ಹೊರಕವಚ ಉದುರಿ ಬಿದ್ದು ಒಳಗಿನ ಗಡಸು ಕೊಂಬು ಮಾತ್ರ ಉಳಿದಿರುತ್ತದೆ.



30ರಿಂದ 50ರ ಸಂಖ್ಯೆಯಲ್ಲಿರುವ ದೊಡ್ಡ ಹಿಂಡಿನಲ್ಲಿ ವಾಸಿಸುವ ಜವುಳು ಜಿಂಕೆ ಮುಖ್ಯವಾಗಿ ಜೊಂಡು ಹುಲ್ಲನ್ನು ಮೇಯುತ್ತದೆ. ಕೆಲವು ಬಾರಿ ಈ ಜಿಂಕೆಗಳ ಹಿಂಡಿನಲ್ಲಿ ನೂರಕ್ಕೂ ಹೆಚ್ಚು ಸದಸ್ಯರಿರುವುದೂ ಉಂಟು. ಸಂತತಿ ಸಂವರ್ಧನೆಯ ಋತುಮಾನದಲ್ಲಿ ಮಾತ್ರ ಗಂಡುಜಿಂಕೆ ಹೆಣ್ಣನ್ನು ಕೂಡಿಕೊಳ್ಳುತ್ತದೆ. ಆನಂತರ ಗಂಡು ಬೇರೆಯಾಗಿ ತನ್ನಂಥ ಗಂಡುಗಳದೇ ಬೇರೊಂದು ಹಿಂಡನ್ನು ಸೇರಿಕೊಳ್ಳುತ್ತದೆ. ಕೆಲವೊಂದು ಜಿಂಕೆಗಳು ಒಂಟಿಯಾಗಿ ಕೂಡ ವಾಸಿಸುತ್ತವೆ. ಹೆಣ್ಣುಗಳು ಮರಿಗಳೊಂದಿಗೆ ಕೂಡಿಕೊಂಡು ತಮ್ಮದೇ ಮಂದೆಯಲ್ಲಿ, ತಮ್ಮದೇ ಸ್ಥೂಲವಾದ ಸೀಮೆಯೊಂದನ್ನು ನಿರ್ಮಿಸಿಕೊಂಡು ಮೇಯುತ್ತವೆ. ಈ ಮಂದೆಗೆ ಹಿರಿಯ, ಆದರೆ ಮರಿ ಹಾಕಬಲ್ಲ ಹೆಣ್ಣು ಜಿಂಕೆಯೊಂದರ ನಾಯಕತ್ವ ಇರುತ್ತದೆ. ಜವುಳು ಜಿಂಕೆಗಳು ಪೂರ್ವ ಮತ್ತು ಉತ್ತರ ಭಾರತದಲ್ಲಿ, ಅಸ್ಸಾಂ, ಉತ್ತರ ಪ್ರದೇಶ

ಮತ್ತು ಮಧ್ಯಪ್ರದೇಶಗಳ ಜವುಳು ಭೂಮಿ ಇಲ್ಲವೆ ಒಣ ಹುಲ್ಲುಗಾವಲುಗಳಲ್ಲಿ ವಾಸಿಸುತ್ತವೆ.

## ನಾಲ್ಕು ಕೊಂಬಿನ ಎರಳೆ

*(ಫೋರ್ ಹಾರ್ನ್ಡ್ ಆಂಟೆಲೋಪ್) Tetracerus quadricornis* (Blainville)

ಮೆಲುಕಾಡಿಸುವ ಸಮಗೊರಸಿನ ಜಿಂಕೆಗಳಂಥ ಪ್ರಾಣಿಗಳಿಗೆ ಇಂಗ್ಲಿಷ್‌ನಲ್ಲಿ 'ಆಂಟೆಲೋಪ್ಸ್' ಎನ್ನುತ್ತಾರೆ. (ವರ್ಣಚಿತ್ರ – 15)ಕನ್ನಡದಲ್ಲಿ ಜಿಂಕೆ, ಎರಳೆ, ಚಿಗರೆ, ಕಡವೆ, ಸಾರಗ ಇತ್ಯಾದಿ ಹೆಸರುಗಳಿದ್ದರೂ ಗೊರಸು ಮತ್ತು ಮೆಲುಕಾಡಿಸುವ ಗುಣಗಳನ್ನು ಆಧರಿಸಿ ಪ್ರತ್ಯೇಕ ವರ್ಗೀಕರಣವಿಲ್ಲ. ಆಂಟೆಲೋಪ್‌ಗಳು ಚುರುಕಿನ ಓಟದ ಶೀಘ್ರ ಚಲನೆಯ ಪ್ರಾಣಿಗಳಾಗಿದ್ದು ಇವುಗಳ ದೃಷ್ಟಿ, ಶ್ರವಣಶಕ್ತಿ ಹಾಗೂ ವಾಸನೆ ಗ್ರಹಿಸುವ ಶಕ್ತಿಯೂ ತುಂಬ ಚುರುಕಾಗಿರುತ್ತದೆ.

ನಾಲ್ಕು ಕೊಂಬಿನ ಎರಳೆಗಳಿಗೆ ಹಿಂದಿಯಲ್ಲಿ 'ಚೌಸಿಂಘಾ' ಎನ್ನುತ್ತಾರೆ. ಆಂಟೆಲೋಪ್‌ಗಳಲ್ಲೇ ಇದು ತೀರಾ ವಿಶಿಷ್ಟವಾದ ಪ್ರಾಣಿ – ಏಕೆಂದರೆ ಇದಕ್ಕೆ ಒಂದರ ಹಿಂದೊಂದರಂತೆ (ಗಂಡುಗಳಲ್ಲಿ ಮಾತ್ರ) ಎರಡು ಜೋಡಿ (ನಾಲ್ಕು) ಪುಟ್ಟ ಮುಳ್ಳಿನಂಥ ಕೊಂಬುಗಳಿರುತ್ತವೆ. ಮುಂದಿನ ಜೋಡಿ ಕೊಂಬುಗಳು ಗಿಡ್ಡವಾಗಿದ್ದು ಐದಾರು ಸೆಂಟಿಮೀಟರ್‌ಗಳುದ್ದದ ಗಡ್ಡೆಯಂತೆ ಕಾಣುತ್ತವೆ. ಹಿಂದಿನ ಜೋಡಿ ಕೊಂಬುಗಳು ಹನ್ನೆರಡು ಸೆಂಟಿಮೀಟರ್‌ಗಳಷ್ಟು ಉದ್ದವಿರುತ್ತವೆ. ಅರವತ್ತು ಸೆಂಟಿಮೀಟರ್ ಎತ್ತರ ಬೆಳೆಯಬಲ್ಲ ಈ ಪ್ರಾಣಿ ಸಾಮಾನ್ಯವಾಗಿ ಒಂದು ಮೀಟರ್ ಉದ್ದವಿರುತ್ತದೆ. ಮೈಮೇಲಿನ ಕೂದಲು ಚಿಕ್ಕದಾಗಿದ್ದು, ತುಪ್ಪಳದ ರೋಮ ಅಷ್ಟೇನೂ ದಟ್ಟವಾಗಿರುವುದಿಲ್ಲ. ಬಣ್ಣ ನಸುಕಂದು. ಕೆಲವು ಚೌಸಿಂಗಾಗಳಿಗೆ ತುಕ್ಕಿನ ಬಣ್ಣವೂ ಇದ್ದೀತು. ಶರೀರದ ತಳಭಾಗ ಬಿಳಿಯದಾಗಿರುತ್ತದೆ. ಕಾಲುಗಳ ಎದುರು ದಟ್ಟವರ್ಣದ ಪಟ್ಟೆಗಳಿರುತ್ತವೆ. ಮುಂಗಾಲುಗಳ ಎದುರಿನ ಪಟ್ಟೆ ಅಗಲದ್ದಾಗಿರುತ್ತದೆ.

ಚೌಸಿಂಗಾಗಳು ಹಿಮಾಲಯ ಪರ್ವತಶ್ರೇಣಿ ಬಿಟ್ಟರೆ ಭಾರತದ ಬಯಲು ಪ್ರದೇಶಗಳಲ್ಲಿ, ಏರಿಳಿಯುವ ಸಣ್ಣಪುಟ್ಟ ಕಣಿವೆಗಳಲ್ಲಿ ವಾಸಿಸುತ್ತವೆ. ದಟ್ಟ ಅರಣ್ಯಗಳಲ್ಲಿ ಇವುಗಳ ಓಡಾಟವಿರುವುದಿಲ್ಲ. ನೀರಿನ ತಡಿಗಳಿಗೆ ಪದೇ ಪದೇ ಬಾಯಾರಿಕೆಯೆಂದು ಬರುವ ಇದು ಒಂಟಿಯಾಗಿ ಇಲ್ಲವೆ ಜೋಡಿಯ ಜತೆ ಕಂಡುಬರುತ್ತದೆ.

## ಹಣೆಕೊಂಬಿನ ಜಿಂಕೆ

*(ಬ್ರೌ ಆಂಟ್ಲರ್ ಡಿಯರ್ ಅಥವಾ ಥಾಮಿನ್) Cervus eldi eldi* M' clelland

ಸಾಂಬಾರದಷ್ಟೇ ಅಂದವಾದ ಆದರೆ ಅದಕ್ಕಿಂತ ಚಿಕ್ಕದಾದ ಪ್ರಾಣಿ ಥಾಮಿನ್. (ವರ್ಣಚಿತ್ರ – 14)ಇದರ ಕೊಂಬುಗಳು ಮನಮೋಹಕ. ಎರಡೂ ಕೊಂಬುಗಳೂ ಡೊಂಕಾಗಿ ಸರಿಸುಮಾರು ವೃತ್ತಾಕಾರದಲ್ಲಿ ಬಾಗಿ ಒಂದಕ್ಕೊಂದು ಸ್ಪರ್ಶಿಸುವಂತೆ

ಕಾಣುತ್ತವೆ. ಕೊಂಬಿನ ಬುಡದಲ್ಲಿ ಹಾಗೂ ತುದಿಯಲ್ಲಿ ಪುಟ್ಟ ಪುಟ್ಟ ಎಂಟು ಹತ್ತು ಟಿಸಿಲುಗಳಿರುತ್ತವೆ. ಹುಬ್ಬಿನ ಬಳಿಯ ಎರಡು ಟಿಸಿಲುಗಳು ಅರ್ಧ ಚಂದ್ರಾಕೃತಿಯಲ್ಲಿ ಕೆಲವೊಮ್ಮೆ ಪೂರ್ಣವೃತ್ತವೆಂಬಂತೆ ಬಾಗಿರುತ್ತವೆ. ಆದಕ್ಕೇ ಈ ಜಿಂಕೆಗೆ 'ಹಣೆಕೊಂಬಿನ ಜಿಂಕೆ' ಎನ್ನಲಾಗುತ್ತದೆ. ಇದರ ತುಪ್ಪಳ ಒರಟೊರಟಾಗಿದ್ದು ಕೆಲವು ಕಡೆ ದಪ್ಪ ರೋಮಗಳಿಂದ ಕೂಡಿರುತ್ತವೆ. ಚಳಿಗಾಲದಲ್ಲಿ ನಸುಹಳದಿ ಛಾಯೆಗೆ ತಿರುಗುವ ಗಂಡುಗಳ ತುಪ್ಪಳ ಬೇಸಿಗೆಯಲ್ಲಿ ದಟ್ಟ ·ಕಂದು ಬಣ್ಣಕ್ಕೆ ತಿರುಗುತ್ತದೆ. ಹೆಣ್ಣು ಜಿಂಕೆ ಹಾಗೂ ಮರಿಗಳ ಬಣ್ಣ ನಸು ಹಳದಿಯಾಗಿದ್ದು, ಮರಿ ಜಿಂಕೆಗಳಿಗೆ ಮೈಮೇಲೆ ಚುಕ್ಕಿಗಳೂ ಇರುತ್ತವೆ.

ಥಾಮಿನ್‌ಗಳು ಅಷ್ಟೇನೂ ದಟ್ಟವಲ್ಲದ ಕುರುಚಲು ಕಾಡನ್ನು ಇಷ್ಟಪಡುತ್ತವೆ. ಸದ್ಯಕ್ಕೆ ಇವು ಮಣಿಪುರದ ಲೋಗ್‌ಟಾಕ್ ಸರೋವರದ ಸುತ್ತಲಿನ ಕೈ ಬುಲ್ ಲಾವ್ಜೊ ರಾಷ್ಟ್ರೀಯ ಉದ್ಯಾನಕ್ಕೆ ಸೀಮಿತವಾಗಿವೆ. ಚಿಕ್ಕ ತಂಡದೊಂದಿಗೆ ಹುಲ್ಲು ಮೇಯುತ್ತಲೋ ಇಲ್ಲವೆ, ಉದ್ಯಾನದ ಪಕ್ಕದ ಹೊಲಗದ್ದೆಗಳಿಗೆ ದಾಳಿ ಇಕ್ಕುತ್ತಲೋ ಇವು ಬದುಕಿರುತ್ತವೆ.

## ಹಾನಗಲ್ ಸಾರಂಗ ಅಥವಾ ಕಾಶ್ಮೀರಿ ಕಡವೆ

*(ಹಾನಗಲ್ ಆರ್ ಕಶ್ಮೀರಿ ಸ್ಟ್ಯಾಗ್) Cervus elaphus hanglu* Wagner

ಗಾತ್ರದಲ್ಲಿ ಸುಮಾರು ದೊಡ್ಡದೆಂದೇ ಹೇಳಬಹುದಾದ ಹಾನಗುಲ್ ಸಾರಂಗಕ್ಕೆ ಟಿಸಿಲೊಡೆದಿರುವ ದೊಡ್ಡ ಕೋಡುಗಳಿವೆ. ಒಂದೊಂದು ಕೊಂಬಿನ ಮೇಲೂ ಐದು ಅಥವಾ ಆರು ಟಿಸಿಲುಗಳನ್ನು ಕಾಣಬಹುದು. ನಸುಗೆಂಪು ಅಥವಾ ದಟ್ಟ ಕಂದುಬಣ್ಣದ ಈ ಮೃಗಕ್ಕೆ ದೇಹದ ಹಿಂಭಾಗದಲ್ಲಿ ಬಾಲದ ಕಡೆ ಬಿಳಿ ಪಟ್ಟೆ ಇರುತ್ತದೆ. ಕಿವಿ ಮತ್ತು ಮುಖದ ಪಕ್ಕದ ಭಾಗದಲ್ಲಿ ಬಿಳಿ ಛಾಯೆಯಿರುತ್ತದೆ.



ಕಾಶ್ಮೀರ ಕೊಳ್ಳದ ಉತ್ತರ ಭಾಗ ಹಾಗೂ ಹಿಮಾಚಲ ಪ್ರದೇಶದ ಚಂಬಾ ಕೊಳ್ಳದ ಉತ್ತರಕ್ಕೆ ಹಾನಗುಲ್ ಸಾರಂಗಗಳಿರುತ್ತವೆ. ನದಿ ಕೊಳ್ಳದ ಬಳಿಯ ದಟ್ಟಡವಿಗಳಲ್ಲಿ ಎರಡರಿಂದ ಹದಿನೆಂಟು ಸಾರಂಗಗಳು ಗುಂಪಾಗಿ ಓಡಾಡುತ್ತವೆ. ಈಗ ಕಾಶ್ಮೀರದಲ್ಲಿ ಅವುಗಳ ವಾಸಸ್ಥಾನ ಅಲ್ಲಿಯ ಹತ್ತು ಸಾವಿರ ಅಡಿ ಎತ್ತರದ ದಾಚಿಗಾಂವ್‌ಗೆ ಮಾತ್ರ ಸೀಮಿತ

ವಾಗಿದೆ. ಚಳಿಗಾಲದಲ್ಲಿ ಸಾರಂಗಗಳು ದೊಡ್ಡ ದೊಡ್ಡ ಹಿಂಡುಗಳಾಗಿ ಪರ್ವತಗಳಿಂದ ಕೆಳಗಿಳಿದು ಬರುತ್ತವೆ. ದುರದೃಷ್ಟವಶಾತ್ ಅವುಗಳ ಸಂಖ್ಯೆ ಕ್ಷೀಣಿಸುತ್ತಿದೆ. ಈ ಶತಮಾನದ ಆದಿಯಲ್ಲಿ 5,000 ದಷ್ಟಿದ್ದ ಹಾನಗುಲ್ ಸಾರಂಗಗಳ ಸಂಖ್ಯೆ 1970ರ ವೇಳೆಗೆ 150 ಕ್ಕೆ ಇಳಿದಿತ್ತು.

## ಕೃಷ್ಣಮೃಗ

*(ಬ್ಲ್ಯಾಕ್ ಬಕ್) Antilope cervicapra* (Linnaeus)

ಜಗತ್ತಿನಲ್ಲಿಯೇ ಅತ್ಯಂತ ಶೋಭಾಯಮಾನ ಪ್ರಾಣಿಯೆಂದು ಕೃಷ್ಣಮೃಗ ಖ್ಯಾತಿ ಪಡೆದಿದೆ. ಪ್ರೌಢ ಗಂಡು ಮೃಗ ಕಪ್ಪು ಕಂದು ಇಲ್ಲವೇ ಅಚ್ಚಕಪ್ಪಿನ ಮೈ ಬಣ್ಣದ್ದಾಗಿದ್ದು, ಕಣ್ಣಿನ ಸುತ್ತ ಹಾಗೂ ದೇಹದ ಕೆಳಭಾಗದಲ್ಲಿ ಬಿಳೀ ಬಣ್ಣ ಪಡೆದಿದೆ. ತಲೆಯ ಮೇಲೆ ಸುರುಳಿ ಆಕಾರದ, 50 ರಿಂದ 60 ಸೆಂಟಿಮೀಟರ್ ಉದ್ದದ ಎರಡು ಕೋಡುಗಳಿರುತ್ತವೆ. ಹೆಣ್ಣು ಸ್ವಲ್ಪ ಸಣ್ಣ ಗಾತ್ರದ್ದಾಗಿದ್ದು ಅದಕ್ಕೆ ಕೋಡುಗಳಿರುವುದಿಲ್ಲ. ಮೈಬಣ್ಣವೂ ಹಳದಿ ಮಿಶ್ರಿತ ಕಂದು. ಕಿಬ್ಬೊಟ್ಟೆ ಮಾತ್ರ ಗಂಡಿನಂತೆ ಬಿಳಿ. ರಾಜಸ್ಥಾನ, ಗುಜರಾತ್, ಮಹಾರಾಷ್ಟ್ರ, ಮಧ್ಯ ಪ್ರದೇಶ ಹಾಗೂ ಕರ್ನಾಟಕದ ಮೈದಾನ ಮತ್ತು ಕುರುಚಲು ಕಾಡುಗಳಲ್ಲಿ ಕೃಷ್ಣಮೃಗ ವಾಸಿಸುತ್ತದೆ. ಸಾಮಾನ್ಯವಾಗಿ ಇವುಗಳ ಮಂದೆಯಲ್ಲಿ 10 ರಿಂದ 30 ಮೃಗಗಳಿರುತ್ತವೆ. ಹುಲ್ಲು, ಎಲೆ, ಹಣ್ಣುಕಾಯಿ ಹಾಗೂ ಅಕೇಶಿಯಾದಂಥ ಸಸ್ಯಗಳ ಮೊಗ್ಗುಗಳನ್ನು ಇವು ತಿನ್ನುತ್ತವೆ. ಅತ್ಯಂತ ಚುರುಕಿನ ಓಟಗಾರ ಪ್ರಾಣಿಗಳಲ್ಲಿ ಕೃಷ್ಣಮೃಗವೂ ಒಂದೆಂದು ಪರಿಗಣಿಸಲಾಗಿದೆ.



ಮನುಷ್ಯರು ಇದನ್ನೂ ಬಿಟ್ಟಿಲ್ಲ. ಕೇವಲ ಖಯಾಲಿ ಬೇಟೆಗಾಗಿ, ಚರ್ಮಕ್ಕಾಗಿ, ಮಾಂಸಕ್ಕಾಗಿ ಪದೇಪದೇ ಇವುಗಳನ್ನು ಕೊಂದಿದ್ದಾರೆ. ಪರಿಣಾಮವಾಗಿ ಇಂದು ಕೃಷ್ಣಮೃಗಗಳ ಸಂತತಿ ಕ್ಷೀಣಿಸಿದೆ. ಕೇವಲ ಸಂರಕ್ಷಿತ ಕ್ಷೇತ್ರಗಳಲ್ಲಿ ಇಲ್ಲವೆ ಅಭಯಾರಣ್ಯಗಳಲ್ಲಿ ಇವುಗಳನ್ನು ಈಗ ನೋಡಬಹುದಾಗಿದೆ. ರಾಜಾಸ್ತಾನದ ಬೈಷ್ಣೋಯಿ ಜನಾಂಗದವರು ಮಾತ್ರ ಧಾರ್ಮಿಕ ಶ್ರದ್ಧೆಯಿಂದ ಇವುಗಳನ್ನು ಶತಮಾನಗಳಿಂದ ಸಂರಕ್ಷಿಸಿಕೊಂಡು ಬಂದು ಆದರಣೆಗೆ ಪಾತ್ರರಾಗಿದ್ದಾರೆ. ಅಲ್ಲಿನ ಖೇಜರ್ಲಿ ಪ್ರಾಂತದಲ್ಲಿ ಕೃಷ್ಣಮೃಗಗಳು ಮಾನವ ಆವಾಸದ ಮಧ್ಯೆಯೂ ಸ್ವಚ್ಛಂದವಾಗಿ ಓಡಾಡುವುದನ್ನು ನೋಡಬಹುದು.

## ಕಸ್ತೂರಿ ಮೃಗ

*(ಮಸ್ಕ್ ಡಿಯರ್) Moschus moschiferus* Linnaeus

ಹೊಕ್ಕಳಿನ ಬಳಿಯ ಕಿಬ್ಬೊಟ್ಟೆಯಲ್ಲಿನ ಸಣ್ಣ ಗ್ರಂಥಿಯಿಂದ ಕಸ್ತೂರಿ ಪರಿಮಳದ ಅಂಟನ್ನು ಜಿನುಗಿಸುವ ಈ ಜಿಂಕೆಗೆ ಕೊಂಬುಗಳಿಲ್ಲ. ಮೊಂಡು ಬಾಲ, ದೊಡ್ಡ ಕಿವಿ, ಚೂಪು ಮೂತಿಯ ಇದು ಸಂತಾನ ವೃದ್ಧಿಯ ಸಮಯ ಬಂದಾಗ ಹೆಣ್ಣಿನ ಆಕರ್ಷಣೆಗೆಂದು ಉಗ್ರ ಪರಿಮಳದ ಅಂಟನ್ನು ಸ್ರವಿಸುತ್ತದೆ. ಆ ಅವಧಿಯನ್ನು ಬಿಟ್ಟರೆ ವರ್ಷದ ಮಿಕ್ಕೆಲ್ಲ ಋತುಗಳಲ್ಲಿ ಒಬ್ಬಂಟಿಯಾಗಿ, ಹಗಲು ನಿದ್ರಿಸುತ್ತ ರಾತ್ರಿ ವೇಳೆ ಮೇವು ಹುಡುಕುತ್ತದೆ. ಗಂಡಿಗೆ ಪರಿಮಳ ಗ್ರಂಥಿಯೊಂದೇ ಅಲ್ಲ, ತುಟಿಯ ಎರಡೂ ಕಡೆ ಪುಟ್ಟ ದಂತಗಳೂ ಹೊರಚಾಚಿರುತ್ತವೆ. ಒರಟು ರೋಮಗಳ ತುಪ್ಪಳಕ್ಕೆ ಕಪ್ಪು, ಕಂದಿನ ಇಲ್ಲವೆ ಚಿನ್ನದ ಕೆಂಪಿನ ಬಣ್ಣವಿರುತ್ತದೆ.



ಇಂದು ಬದುಕಿರುವ ಜಿಂಕೆ ಕುಲಗಳಲ್ಲೇ ಕಸ್ತೂರಿ ಮೃಗ ಅತ್ಯಂತ ಪೂರ್ವಿಕ ಎನ್ನಲಾಗುತ್ತದೆ. ಬಂಡೆಗಳ ಮೇಲೆ ಬೆಳೆಯುವ ಪಾಚಿಯನ್ನೂ (ಲೈಕೆನ್), ಜರಿಸಸ್ಯಗಳನ್ನೂ, ಎಲೆ, ಹೂವು, ಹುಲ್ಲನ್ನೂ ಮೇಯುವ ಇದು ಕಾಶ್ಮೀರದಿಂದ ಹಿಡಿದು ಅರುಣಾಚಲ ಪ್ರದೇಶದವರೆಗಿನ ಎತ್ತರದ ಪರ್ವತಗಳಲ್ಲಿ ವಾಸಿಸುತ್ತದೆ. ಸುಮಾರು ಐವತ್ತು ಸೆಂಟಿಮೀಟರ್ ಎತ್ತರ ಬೆಳೆಯುವ ಇದಕ್ಕೆ ಹಿಮ ನೆಲದಲ್ಲಿ, ಜಾರು ಬಂಡೆಗಳಲ್ಲಿ ಓಡಾಡಲು ನೆರವಾಗುವಂಥ ದಪ್ಪ, ಗಿಡ್ಡನ್ನ ಕಾಲುಗಳೂ, ದೊಡ್ಡ ಗೊರಸೂ ಇದೆ.

ಪರಿಮಳ ದ್ರವ್ಯಕ್ಕೆಂದು ಇವುಗಳನ್ನು ಮನುಷ್ಯರು ನಿಷ್ಕರುಣೆಯಿಂದ

ಬೇಟೆಯಾಡಿದ್ದರ ಫಲವಾಗಿ ಇಂದು ಇವುಗಳ ಸಂತತಿಯೇ ನಿರ್ವಂಶವಾಗುವ ಭೀತಿ ತಲೆದೋರಿದೆ. ಈ ಅಪರೂಪದ ಮೃಗವನ್ನು ಹೇಗಾದರೂ ಉಳಿಸಲೆಂದು ಕೃತಕ ಸಂಗೋಪನ ಯತ್ನಗಳು ಜಾರಿಯಲ್ಲಿವೆ.

**ಮೂಷಕ ಜಿಂಕೆ**

*(ಮೌಸ್ ಡಿಯರ್) Tragulus meminna* (Erxleben)

ಮೂಷಕ ಜಿಂಕೆ ತುಂಬಾ ಚಿಕ್ಕ ಪ್ರಾಣಿ. 25ರಿಂದ 30ಸೆಂಟಿಮೀಟರ್ ಎತ್ತರದಷ್ಟೇ. ಅದಕ್ಕೆ ಕೊಂಬುಗಳಿಲ್ಲ. ಆದರೆ ಪುಟ್ಟ ಬಾಲ ಇದೆ. ಎಲೆ ಕಂದು ಬಣ್ಣದ ತುಪ್ಪಳದ ಮೇಲೆ ಅಲ್ಲಲ್ಲಿ ಹಳದಿ ಚುಕ್ಕೆಗಳಿದ್ದು, ಹೊಟ್ಟೆಯ ಭಾಗ ಬಿಳಿದಾಗಿದೆ. ಗಂಡಿಗೆ ಎರಡೂ ಬಾಚಿ ಹಲ್ಲುಗಳೂ ಉದ್ದವಾಗಿ ಬೆಳೆದು ಕೋರೆದಾಡಿಗಳಂತೆ ಹೊರಕ್ಕೆ ಚಾಚಿರುತ್ತವೆ.



ಹುಲ್ಲು, ಚಿಗುರೆಲೆಗಳನ್ನು ತಿಂದು ಬದುಕುವ ಮೂಷಕ ಜಿಂಕೆ ಪುಕ್ಕಲು ಪ್ರಾಣಿಯಾಗಿದ್ದು ಒರಿಸ್ಸಾ, ಬಿಹಾರ, ಮಧ್ಯಪ್ರದೇಶ ಹಾಗೂ ದಕ್ಷಿಣ ಭಾರತದ 1,800 ಮೀಟರಿಗಿಂತ ಎತ್ತರದ ಭೂಪ್ರದೇಶದಲ್ಲಿ ವಾಸಿಸುತ್ತದೆ.

**ಚಿಂಕಾರಾ**

*(ಇಂಡಿಯನ್ ಗ್ಯಾಝೆಲ್) Gazella dorcas* (Linnaeus)

ಕೃಷ್ಣಮೃಗದಂತೆ ಗ್ಯಾಝೇಲ್ (ಚಿಂಕಾರಾ) ಕೂಡಾ ತುಂಬ ಶೋಭಾಯಮಾನ ಮೃಗ. ತೆಳ್ಳನ್ನ ದೇಹ. ತುಸುವೇ ಬಾಗಿದ ತಿರುಪಣಿ ಕೋಡುಗಳು, ಹುರಿದ ಗೋಡಂಬಿಯ ಮೈಬಣ್ಣ – ಇವು ಇದರ ಪ್ರಮುಖ ಲಕ್ಷಣಗಳು. ಹೊಟ್ಟೆ, ಎದೆ ಹಾಗೂ ಮುಖದ



ವರ್ಣಚಿತ್ರ –13: ಕಾಟಿ (ಭಾರತದ ಕಾಡುಕೋಣ)



ವರ್ಣಚಿತ್ರ –14: ಹಣೆಕೊಂಬಿನ ಜಿಂಕೆ



ವರ್ಣಚಿತ್ರ –15: ನಾಲ್ಕು ಕೊಂಬಿನ ಜಿಂಕೆ



ವರ್ಣಚಿತ್ರ –16: ಗ್ರೇಟ್ ಇಂಡಿಯನ್ ಬಸ್ಟರ್ಡ್



ವರ್ಣಚಿತ್ರ –17: ಭರತಪುರ ಪಕ್ಷಿಧಾಮದಲ್ಲಿ ಸೈಬೀರಿಯದ ಕೊಕ್ಕರೆ



ವರ್ಣಚಿತ್ರ -18: ಕಪ್ಪು ಕತ್ತಿನ ಕೊಕ್ಕರೆ



ವರ್ಣಚಿತ್ರ -19: ಭಾರತದ ಕಲ್ಲು ಹೆಬ್ಬಾವು

ಕೆಳಭಾಗ ಬಿಳಿಯದು. ಹೆಣ್ಣು ಚಿಂಕಾರಾಗಳಲ್ಲಿ ಕೋಡು ಮೊಳೆಯುತ್ತವಾದರೂ ಗಂಡಿನದರಷ್ಟು ದೊಡ್ಡದಾಗಿ ಬೆಳೆಯುವುದಿಲ್ಲ.



ಹತ್ತರಿಂದ ಇಪ್ಪತ್ತು ಚಿಂಕಾರಾಗಳು ಒಟ್ಟೊಟ್ಟಾಗಿ ಶುಷ್ಕ, ಕುರುಚಲು ಕಾಡಿನಲ್ಲಿ ಜೀವಿಸುತ್ತವೆ. ಹುಲ್ಲು, ಚಿಗುರೆಲೆ, ರಸಭರಿತ ಹಣ್ಣುಗಳನ್ನು ತಿನ್ನುವ ಇವು ಭಾರೀ ಜೋರಾಗಿ ಓಡುತ್ತವೆ. ಮಧ್ಯಭಾರತ ಮತ್ತು ವಾಯುವ್ಯ ಪ್ರಾಂತಗಳಲ್ಲಿ ಇವು ಕಂಡುಬರುತ್ತವೆ.

## ಟಿಬೇಟದ ಗ್ಯಾರ್ಝಿಲ್

*Procapra picticaudata* Hodgson



ಸಾಕಿದ ಆಡುಗಳಷ್ಟೇ ಗಾತ್ರದ ಈ ಗ್ಯಾರ್ಝಿಲ್‌ಗಳು ಕಪ್ಪು ಬಣ್ಣದವಾಗಿದ್ದು, ಇವುಗಳ ಕೊಂಬು ಹಿಂದಕ್ಕೆ ಬಾಗಿರುತ್ತವೆ. ಪುಟ್ಟ ಬಾಲದ ತುದಿಯೂ ಕಪ್ಪಗಿರುತ್ತದೆ. ಹೆಣ್ಣುಗಳಿಗೆ ಕೊಂಬುಗಳಿರುವುದಿಲ್ಲ.

ಟಿಬೆಟನ್ ಗ್ಯಾರ್ಝಿಲ್‌ಗಳನ್ನು ಟಿಬೆಟ್, ಲಡಾಖ್‌ನ ಪೂರ್ವಭಾಗ ಮತ್ತು ಕುಮಾಂವ್ ಹಾಗೂ ಸಿಕ್ಕಿಂನ ಪರ್ವತ ಶ್ರೇಣಿಗಳಲ್ಲಿ ಕಾಣಬಹುದಾಗಿದೆ.

### ಹಿಮಾಲಯದ ತಾಹ್ರ್

*Hemitragus jemlahicus* (H. Smith)

ಇದು ಗುಡ್ಡದ ಮೇಕೆ. ಕುತ್ತಿಗೆ, ಭುಜದ ಬಳಿಯ ಉದ್ದದ ಜೂಲು ಮೊಣಕಾಲಿನವರೆಗೂ ಇಳಿದಿದೆ. ಶರೀರದ ತುಂಬೆಲ್ಲಾ ಉದ್ದನ್ನ ಒರಟು ಕೂದಲು. ಬಲಿಷ್ಠ ದೇಹದ ಈ ಮೃಗಕ್ಕೆ ದಷ್ಟಪುಷ್ಟ ಕೈಕಾಲುಗಳಿದ್ದು, ನೆಟ್ಟಗಿನ ಕಿವಿ ಹಾಗೂ ಹಿಂದಕ್ಕೆ ಬಾಗಿದ ಕೊಂಬುಗಳಿವೆ. ತುಪ್ಪಳದ ಬಣ್ಣ ಕಂದುಗೆಂಪು.



ಹೆಸರಿನಲ್ಲೇ ಗೊತ್ತಾಗುವಂತೆ, ಕಾಶ್ಮೀರದಿಂದ ಹಿಡಿದು ಭೂತಾನದವರೆಗೆ ಹಿಮಾಲಯದ ಪರ್ವತ ಶ್ರೇಣಿಯಲ್ಲಿ ಇದು ವಾಸಿಸುತ್ತದೆ. ಓಕ್ ಮತ್ತು ಇತರ ಸೂಚಿಪರ್ಣ ವೃಕ್ಷಗಳಿರುವ 3,000–4,000 ಮೀಟರ್ ಎತ್ತರದವರೆಗಿನ ಇಳಿಜಾರು ಗುಡ್ಡಗಳಲ್ಲಿ ಇದು ಮೇಯುತ್ತದೆ. ಚಳಿಗಾಲದಲ್ಲಿ ಕೆಳಕ್ಕೆ ಬರುತ್ತದೆ.

### ನೀಲಗಿರಿ ತಾಹ್ರ್

*Himitragus hylocrius* (Ogilby)

ಹಿಮಾಲಯದ ತಾಹ್ರ್ ಮೃಗಕ್ಕೆ ಪೂರಕವಾಗಿ ದಕ್ಷಿಣ ಭಾರತದಲ್ಲಿ ನೋಡಸಿಗುವ

ಏಕೈಕ ಗುಡ್ಡದ ಮೇಕೆ ಇದು. ಗುಡ್ಡಬೆಟ್ಟಗಳನ್ನು ಸಲೀಸಾಗಿ ಏರಿಳಿಯುತ್ತ, ಕಲ್ಲು ಬಂಡೆಗಳ ಪರಿಸರದಲ್ಲಿ ಬಾಳಬಲ್ಲ ಚುರುಕಿನ ಪ್ರಾಣಿ. ಬೂದು ಇಲ್ಲವೆ ಕಂದುಬಣ್ಣದ ಈ ತಾಹ್ರ್ ಮೃಗದ ತುಪ್ಪಳ ವಯಸ್ಸಾದಂತೆಲ್ಲ ಕೊಂಚ ಕಪ್ಪಾಗುತ್ತದೆ. ಹೆಣ್ಣು ಹಾಗೂ ಮರಿ ಮೇಕೆಗಳು ಬೂದುಮಿಶ್ರಿತ ಹಳದಿ ಬಣ್ಣದ್ದಾಗಿರುತ್ತವೆ. ಪ್ರೌಢ ಗಂಡಿಗೆ ಬೆನ್ನ ಮೇಲೆ ಬೂದು ಹೊದಿಕೆ ಇದ್ದು, ಕೆಲಮಟ್ಟಿನ ಜೂಲು ಕೂಡಾ ಇರುತ್ತದೆ. ಹಿಮ್ಮೊಗವಾಗಿ ಬಾಗಿದ ಸಮಾನಾಂತರ ಕೊಂಬುಗಳಿಗೆ ಅಡ್ಡಡ್ಡ ಗೀರುಗಳಿರುತ್ತವೆ (ಮುಖಪುಟ ನೋಡಿ).

ತಮಿಳ್ನಾಡಿನ ನೀಲಗಿರಿ ಹಾಗೂ ಅಣ್ಣಾಮಲೈ ಪರ್ವತ ಶ್ರೇಣಿಯಲ್ಲೂ, ಕೇರಳದ ಪಶ್ಚಿಮ ಘಟ್ಟಗಳ ಕೆಲಭಾಗದ 1,300 ರಿಂದ 2,600 ಮೀಟರ್ ಎತ್ತರದ ಗುಡ್ಡಬೆಟ್ಟಗಳಲ್ಲೂ ತಾಹ್ರ್ ನೋಡಸಿಗುತ್ತವೆ. ಹಿಂಡುಹಿಂಡಾಗಿ, 5 ರಿಂದ ಹಿಡಿದು 50ರವರೆಗೆ ಒಟ್ಟೊಟ್ಟಾಗಿ ಮರಿಗಳೊಂದಿಗೆ ಸಂಚರಿಸುತ್ತವೆ. ಮರಿ ಹಾಕಲು ಇವಕ್ಕೆ ನಿರ್ದಿಷ್ಟ ಋತುಮಾನ ಇಲ್ಲ. ಸಾಮಾನ್ಯವಾಗಿ ಹೆಣ್ಣು ಒಂದೊಂದು ಬಾರಿಗೆ ಎರಡೆರಡು ಮರಿಗಳನ್ನೀಯುತ್ತದೆ.

ನೀಲಗಿರಿ ತಾಹ್ರ್‌ಗಳು ವಿನಾಶದ ಅಂಚಿಗೆ ಬಂದಿವೆ. ಮಾಂಸಕ್ಕಾಗಿ ಬೇಟೆಯಾಡುವುದು, ಏಕಜಾತಿಯ ಸಸ್ಯವನಗಳ ನಿರ್ಮಾಣ, ವಾಸಸ್ಥಾನದ ಅತಿಕ್ರಮಣವೇ ಮುಂತಾದ ಕಾರಣಗಳಿಂದಾಗಿ ಇವುಗಳ ಸಂಖ್ಯೆ ಕ್ಷೀಣಿಸಿದೆ. ಮಾಂಸಾಹಾರಿ ಪ್ರಾಣಿಗಳ ಬೇಟೆಗೆ ತುತ್ತಾಗಿಯೂ ಇವುಗಳ ಸಂತತಿ ಗಣನೀಯವಾಗಿ ಇಳಿಮುಖವಾಗುತ್ತಿದೆ.

### ಐಬೆಕ್ಸ್

*Capra ibex* Linnaeus



ಹಿಮಾಲಯ ಪರ್ವತ ಶ್ರೇಣಿಯಲ್ಲಿ ವಾಸಿಸುವ ಇದೂ ಒಂದು ಬಗೆಯ ಕಾಡುಮೇಕೆಯೆಂದೇ ಹೇಳಬಹುದು. ಆದರೆ ಇದಕ್ಕೆ ಜೂಲು ಇಲ್ಲ. ಬದಲಿಗೆ ಗಂಡುಮೇಕೆಗೆ ಗಡ್ಡವಿದೆ. ಬಾಗಿದ ಉದ್ದನ್ನ ಚಪ್ಪಟೆ ಕೊಂಬುಗಳಿವೆ. ಹೆಣ್ಣಿನ ಕೊಂಬುಗಳು ಚಿಕ್ಕದಾಗಿರುತ್ತವೆ. ಐಬೆಕ್ಸ್‌ನ ಮೈಬಣ್ಣ ಆಯಾ ಋತುಮಾನಕ್ಕೆ ತಕ್ಕಂತೆ ಬದಲಾಗುತ್ತಿರುತ್ತದೆ. ಚಳಿಗಾಲದಲ್ಲಿ ಹಳದಿ ಮಿಶ್ರಿತ ಬೂದು ಇದ್ದದ್ದು ಬೇಸಿಗೆ ಬಂದಾಗ ಕಂದುಬಣ್ಣಕ್ಕೆ ತಿರುಗುತ್ತದೆ. ಗಂಡಿಗೆ ಅಲ್ಲಲ್ಲಿ ಬಿಳಿ, ಹೆಣ್ಣಿಗೆ ಅಲ್ಲಲ್ಲಿ ಹಳದಿ ಮಚ್ಚೆಗಳು ಕಾಣುತ್ತವೆ.

ಹಿಮಾಲಯದ 2,500 ರಿಂದ 7,000 ಮೀಟರ್ ಎತ್ತರದವರೆಗಿನ ಪರ್ವತ ಶ್ರೇಣಿಗಳಲ್ಲಿ ವಾಸಿಸುವ ಈ ಐಬೆಕ್ಸ್ ಮೇಕೆಗಳ ಉಣ್ಣೆ ಅತ್ಯಂತ ಉತ್ತಮ ಗುಣಮಟ್ಟದ್ದೆಂಬ ಪ್ರತೀತಿ ಇದೆ. ಪ್ರಸಿದ್ಧಿ 'ಪಾಶ್ಮಿನಾ' ಶಾಲು, ಕಾಲುಚೀಲ, ಕೈಗೌಸುಗಳ ತಯಾರಿಕೆಗೆ ಐಬೆಕ್ಸ್ ಉಣ್ಣೆಯನ್ನೇ ಬಳಸಲಾಗುತ್ತದೆ.

**ಮಾರ್‌ಖೋರ್**

*Capra falconeri* (Wagner)



ದೊಡ್ಡ ಗಾತ್ರದ ಈ ವನ್ಯಮೇಕೆಗೂ ರೇಷ್ಮೆಯಂಥ ದಪ್ಪ ತುಪ್ಪಳ ಇರುತ್ತದೆ. ಗಂಡುಮೃಗಕ್ಕೆ ಬೂದುಬಣ್ಣದ ಎದ್ದು ಕಾಣುವ ಜೂಲು ಇದ್ದು, ಇದು ಮೊಣಕಾಲನ್ನು ಮುಚ್ಚುವಷ್ಟು ಉದ್ದ ಬೆಳೆಯುತ್ತದೆ. ಜೂಲು ಹೆಣ್ಣುಗಳ ಗದ್ದಕ್ಕೆ ಮಾತ್ರ ಸೀಮಿತವಾಗಿದೆ. ಜತೆಗೇ ಗಂಡಿಗೆ ಒಂದು ಜೋಡಿ ಚಮತ್ಕಾರಿಕ ಕೊಂಬುಗಳೂ ಇವೆ. ಚಪ್ಪಟೆಯಾದ ಈ ಕೊಂಬುಗಳು ಸುರುಳಿ ಸುರುಳಿಯಾಗಿ

ಹಿಂದಕ್ಕೆ ಚಾಚಿರುತ್ತವೆ. ಹೆಣ್ಣಿಗೂ ಕೊಂಬು ಇದೆಯಾದರೂ, ಹೋಲಿಕೆಯಲ್ಲಿ ಅವು ಚಿಕ್ಕವು. ಉದ್ದುದ್ದ ರೋಮಗಳ ಈ ಮೃಗದ ತುಪ್ಪಳ ಚಳಿಗಾಲದಲ್ಲಿ ತುಕ್ಕು ಹಿಡಿದಂತೆ ಕಾಣುತ್ತದಾದರೂ ಬೇಸಿಗೆಯಲ್ಲಿ ಕಂದುಗೆಂಪಿಗೆ ತಿರುಗುತ್ತದೆ. ಕಾಶ್ಮೀರವೂ ಸೇರಿದಂತೆ, ಪಶ್ಚಿಮ ಹಿಮಾಲಯದ ಗುಡ್ಡಗಾಡುಗಳಲ್ಲಿ 600ರಿಂದ 3,600ಮೀಟರ್ ಎತ್ತರದವರೆಗಿನ ಪ್ರದೇಶಗಳಲ್ಲಿ ಮಾರ್‌ಖೋರ್ ಮೇಷಗಳು ವಾಸಿಸುತ್ತವೆ. ಸಾಮಾನ್ಯವಾಗಿ ಇವು 12ರಿಂದ 50ರವರೆಗಿನ ಹಿಂಡುಗಳಲ್ಲಿ ಸಂಚರಿಸುತ್ತವೆ.

## ಬಿರುಗೂದಲ ಮೊಲ

*(ಹಿಸ್ಪಿಡ್ ಹೇರ್) Caprolagus hispidus* (Pearson)

ಹೆಸರೇ ಸೂಚಿಸುವಂತೆ ಮೊನಚಾದ ಒರಟು ಕೂದಲುಗಳುಳ್ಳ ಮೊಲ ಇದು. ಸಾಮಾನ್ಯವಾಗಿ ಇದರ ಮೈಬಣ್ಣ ಇಟ್ಟಿಗೆ ಕೆಂಪಿನದಾಗಿದ್ದು, ಬಾಲ ಮತ್ತು ಕಿಬ್ಬೊಟ್ಟೆಯ ಬಳಿ ಮಾತ್ರ ಅದು ಬಿಳಿದಾಗಿರುತ್ತದೆ. ಇತರ ಮೊಲಗಳ ಕಿವಿಗಿಂತ ಈ ಹಿಸ್ಪಿಡ್ ಮೊಲದ ಕಿವಿ ಕೊಂಚ ಚಿಕ್ಕದು.

ಹಿಂದೊಂದು ಕಾಲದಲ್ಲಿ ಹಿಮಾಲಯದ ಪಾದಭೂಮಿಯಲ್ಲಿ ಉತ್ತರಪ್ರದೇಶ, ಅಸ್ಸಾಂ, ತ್ರಿಪುರಾ, ಪಶ್ಚಿಮ ಬಂಗಾಳದವರೆಗಿನ ತೃಣಕಾಡುಗಳಲ್ಲಿ ವಾಸಿಸುತ್ತಿದ್ದ ಇದು ಈಗ ಕೇವಲ ಪಶ್ಚಿಮ ಬಂಗಾಳ ಮತ್ತು ಅಸ್ಸಾಂಗಳಿಗಷ್ಟೇ ಸೀಮಿತವಾಗಿದೆ. ಮಾಮೂಲು ಮೊಲದಷ್ಟು ಚುರುಕಿಲ್ಲದ ಈ ನಿಧಾನ ಚಲನೆಯ ಮೊಲವು ಬೇರು, ತೊಗಟೆ, ಎಲೆ ಚಿಗುರೆಲೆಗಳನ್ನು ಭಕ್ಷಿಸುತ್ತದೆ. ವರ್ಷಕ್ಕೆ ಎರಡು ಅಥವಾ ಮೂರು ಬಾರಿ ಮರಿಗಳಿಗೆ ಜನ್ಮ ಕೊಡುತ್ತದೆ. ಬಿರುಗೂದಲ ಮೊಲದ ಜೀರ್ಣಾಂಗ ತೀರಾ ವಿಶಿಷ್ಟವಾದುದು. ಮಲದ ಜತೆ ಇದು ಕೆಲವು ಪ್ರಮಾಣದ ಅರೆ ಜೀರ್ಣವಾದ ಆಹಾರವನ್ನು ಹೊರಕ್ಕೆ ಹಾಕಿ ಮತ್ತೆ ಅದನ್ನೇ ಭಕ್ಷಿಸುತ್ತದೆ. ಎರಡನೇ ಬಾರಿ ಈ ಅರೆ ಜೀರ್ಣ ಪದಾರ್ಥ (ಇದಕ್ಕೆ 'ಜಠರ ಗುಳಿಗೆ' ಎನ್ನಲಾಗುತ್ತದೆ) ಹೊಟ್ಟೆಗೆ ಹೋಗಿ ಪೂರ್ತಿ ಜೀರ್ಣವಾಗುತ್ತದೆ. ಹೀಗೆ, ತಾನು ತಿಂದ ಆಹಾರದ ಪೋಷಕಾಂಶಗಳು ಹಾಗೂ ಅನ್ನಾಂಗಗಳು ಕೊಂಚವೂ ನಷ್ಟವಾಗದಂತೆ ನೋಡಿಕೊಳ್ಳುವ ವ್ಯವಸ್ಥೆ ಈ ಮೊಲಕ್ಕಿದೆ.

ಇದರ ಸಂತಾನೋತ್ಪತ್ತಿ ಕ್ರಿಯೆಯೂ ವಿಶಿಷ್ಟವೆಂದೇ ಹೇಳಬಹುದು. ಇತರ ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಹೆಣ್ಣುಗಳ ಶರೀರದಲ್ಲಿ ಅಂಡಾಣುಗಳು ಸಿದ್ಧವಾದಾಗ ಅವು ಬೆದೆಗೆ ಬರುತ್ತವೆ. ಈ ಮೊಲದ ವಿಷಯದಲ್ಲಿ ಇದು ತಿರುವು ಮುರುವಾಗಿದೆ. ಮೈಥುನ ನಡೆದ ಮರುಗಳಿಗೆಯಲ್ಲಿ ಅಂಡಾಣು ಉತ್ಪತ್ತಿಯಾಗುವುದರಿಂದ ಗರ್ಭಧಾರಣೆ ಶತಸ್ಸಿದ್ಧವಾಗುತ್ತದೆ.

# ಪಕ್ಷಿಗಳು

ಪಕ್ಷಿ ಪ್ರಪಂಚವೇ ವಿಸ್ಮಯಗಳ ಗೂಡು. ವಲಸೆ ಹೋಗುವುದರಿಂದ, ಗೂಡು ಕಟ್ಟುವವರೆಗಿನ ಇವುಗಳ ಪ್ರತಿಯೊಂದು ಕ್ರಿಯೆಯಲ್ಲೂ ಸೌಂದರ್ಯ, ಸಂಗೀತ, ಶೃಂಗಾರ ಹಾಗೂ ಬಣ್ಣಗಳು ಗರಿಗೆದರುತ್ತವೆ. ಗರಿಗಳಿರುವ ಈ ಏಕೈಕ ಜೀವ ಸಂಕುಲದಲ್ಲಿ ಮುಂದಿನ ಎರಡು ಕಾಲುಗಳು ರೆಕ್ಕೆಗಳಾಗಿ ಪರಿವರ್ತನೆಗೊಂಡು ಗಗನಕ್ಕೆ ಜಿಗಿಯುವ ಸಾಮರ್ಥ್ಯ ಪಡೆದಿವೆ.

14 ಕೋಟಿ ವರ್ಷಗಳ ಹಿಂದೆ ಮೆಸೋಜೋಯಿಕ್ ಯುಗದಲ್ಲಿ ಸರೀಸೃಪಗಳ ಮೂಲದಿಂದ ವಿಕಾಸಗೊಂಡ ಪಕ್ಷಿಗಳು ಇಡೀ ಪ್ರಪಂಚವನ್ನು ಆವರಿಸುವಂತೆ ಸಂಖ್ಯಾಸ್ಫೋಟಗೊಂಡಿವೆ. ಅವುಗಳ ಗಾತ್ರದಲ್ಲಿ, ಬಣ್ಣದಲ್ಲಿ, ರೂಪದಲ್ಲಿ, ಸ್ವಭಾವಗಳಲ್ಲಿ ಎಣೆಯಿಲ್ಲದ ವೈವಿಧ್ಯಗಳನ್ನು ಕಾಣಬಹುದು. ಭೂಮಿಯ ಎಲ್ಲ ಖಂಡಗಳಲ್ಲೂ ಊಹಿಸಬಹುದಾದ ಎಲ್ಲ ಬಗೆಯ ವಾಸಕ್ಷೇತ್ರಗಳಲ್ಲೂ ಅವು ವ್ಯಾಪಿಸಿವೆ. ಇಂದು ಪಕ್ಷಿಗಳಲ್ಲಿ 8,600ವಂಶಗಳನ್ನು ಗುರುತಿಸಲಾಗಿದ್ದು, ಪ್ರಾಯಶಃ ಇನ್ನೂ ನೂರಾರು ವಂಶಗಳು ನಮ್ಮ ಗಮನಕ್ಕೆ ಬಾರದೇ ಹೋಗಿರಬಹುದು. ಈ ಬೃಹತ್ ವಂಶಾವಳಿಯನ್ನು 27 ವರ್ಗಗಳಾಗಿ ಅವುಗಳನ್ನೆಲ್ಲ ಸುಮಾರು 155 ಕುಲಗಳಾಗಿ ವಿಂಗಡಿಸಲಾಗಿದೆ.

ನಮಗೆ ಗೊತ್ತಾಗಿರುವ ಅತ್ಯಂತ ಪುರಾತನ ಪಕ್ಷಿ 'ಆರ್ಕಿಯೊಪ್ಟೆರಿಕ್ಸ್'. ಇದರ ಪಳೆಯುಳಿಕೆಗಳು ಬವೇರಿಯಾದ ಪುರಾತನ ಶಿಲಾಪದರಗಳಲ್ಲಿ ಪತ್ತೆಯಾಗಿವೆ. ಅಲ್ಲಿನ ಜಲಜಶಿಲೆಯಲ್ಲಿ ಮೂಡಿದ ಅಚ್ಚಿನಲ್ಲಿ ಈ ಪಕ್ಷಿಯ ಬಹುತೇಕ ಎಲ್ಲ ಪ್ರಮುಖ ಲಕ್ಷಣಗಳೂ ಗೊತ್ತಾಗುವಂತಿವೆ. ಇದಕ್ಕೆ ಸರೀಸೃಪಗಳಿಗಿರುವಂಥ ಉದ್ದನ್ನ ಬಾಲ, ಅದಕ್ಕೆ ಅಂಟಿರುವ ಗರಿಗಳು, ಇಕ್ಕಳದಂಥ ಹಲ್ಲುಗಳು, ಟೊಳ್ಳು ಮೂಳೆಗಳು, ವಿಶಾಲ ರೆಕ್ಕೆಗಳೂ ಇವೆ. 'ಮೀಸೋಜೋಯಿಕ್' ಯುಗದ ಸರೀಸೃಪಗಳಿಂದ ಪಕ್ಷಿಗಳು ವಿಕಾಸಗೊಂಡಿದ್ದು ಈ ಪಳೆಯುಳಿಕೆಯಿಂದ ಖಚಿತವಾಗಿದೆ. ಇಂದು ಇವುಗಳಲ್ಲಿ ಅಗಣಿತ ಪ್ರಮಾಣದಲ್ಲಿ ರೂಪಾಂತರಗಳಾಗಿವೆ. ಹತ್ತು ಪೈಸೆ ನಾಣ್ಯಕ್ಕಿಂತ ಹಗುರವಾದ, ನಾಜೂಕು ಶರೀರದ ಪುಟ್ಟ 'ಹಮ್ಮಿಂಗ್ ಬರ್ಡ್' ಹಕ್ಕಿಯಿಂದ ಹಿಡಿದು, 135 ಕಿಲೋ ತೂಕದ ಭಾರೀ ಗಾತ್ರದ ಉಷ್ಟ್ರಪಕ್ಷಿಯವರೆಗೆ ಈ ಗರಿಧಾರಿಗಳ ಪ್ರಪಂಚ ವೈವಿಧ್ಯಮಯವಾಗಿದೆ.

ನೆಲದ ಮೇಲಿನ ಜೀವಿಗಳು ಹೀಗೆ ದಕ್ಷ ಹಾರುವ ಯಂತ್ರಗಳಾಗಿ ವಿಕಾಸಗೊಂಡಿದ್ದು ಹೇಗೆ? ಇವುಗಳ ಮೂಳೆ ಮತ್ತು ಅಸ್ಥಿಪಂಜರ ಕ್ರಮೇಣ ಹಗುರವಾದವು. ಸ್ನಾಯುಗಳು ಬಲಗೊಂಡವು; ಗರಿಗಳು ಮೂಡಿ ರೆಕ್ಕೆಗಳಾದವು. ಇಂದು ಇವುಗಳ ಬದುಕಿನ ನಿರ್ದಿಷ್ಟ ಉದ್ದೇಶಕ್ಕೆ ತಕ್ಕಂತೆ ಆಯಾ ಅಂಗಾಂಗಗಳು ರೂಪುಗೊಂಡಿವೆ. ಕೊಕ್ಕುಗಳನ್ನೇ ನೋಡಿ: ಗಿಡುಗಗಳಿಗೆ, ಮಾಂಸವನ್ನು ಕಿತ್ತು

ತಿನ್ನಲು ಸಹಾಯಕಾರಿಯಾದಂಥ ಇಕ್ಕಳದ ಮಾದರಿಯ ಕೊಕ್ಕು; ನೀಳ ಕತ್ತಿನ 'ಫ್ಲೆಮಿಂಗೊ'ಗಳಿಗೆ ಹಾಗೂ ಚಮಚದ ಚುಂಚಿನ 'ಸ್ಪೂನ್ ಬಿಲ್'ಗಳಿಗೆ ಕೆಸರನ್ನು ಸೋಸುವ ಜಾಲರಿ ಕೊಕ್ಕು. ಮರಕುಟಿಕಗಳಿಗೆ ರಂಧ್ರ ಕೊರೆಯಲು ಅಗತ್ಯವಾದ ಚಾಣದಂತಹ, ಆದರೆ ಸಂವೇದನಶೀಲ ಉಕ್ಕಿನ ಕೊಕ್ಕು; ಗಿಳಿಗಳಿಗೆ ಬೀಜ ಬಿಡಿಸಲು ಚಿಮ್ಮಟದಂಥ ಕೊಕ್ಕು; ಹಾರ್ನ್‌ಬಿಲ್‌ಗಳಿಗೆ ಶತ್ರುಗಳನ್ನು ಬೆದರಿಸಲು ಬೇಕಾದ ದೊಡ್ಡ ಗಾತ್ರದ, ಬಣ್ಣದ ರಕ್ಷಣಾತ್ಮಕ ಕೊಕ್ಕು.

ಪಕ್ಷಿಗಳ ಪಾದಗಳೂ ಕೊಕ್ಕಿನಷ್ಟೇ ವೈವಿಧ್ಯಮಯವಾಗಿರುತ್ತವೆ. ಓಡಲಿಕ್ಕೆ, ಕೊಂಬೆಯನ್ನು ಅಮುಕಿ ಹಿಡಿಯಲಿಕ್ಕೆ, ನೀರಿನಲ್ಲಿ ಈಜಲಿಕ್ಕೆ, ಆಹಾರವನ್ನು ಹಿಡಿಯಲಿಕ್ಕೆ, ಮೈ ತುರಿಸಿಕೊಳ್ಳಲಿಕ್ಕೆ ಹೀಗೆ ಎಲ್ಲ ಬಗೆಯ ಕೆಲಸಗಳಿಗೂ ಅವು ಅನುಕೂಲವಾಗುವಂತಿರುತ್ತವೆ. ಪಕ್ಷಿಗಳ ದೃಷ್ಟಿಶಕ್ತಿ ಹಾಗೂ ಶ್ರವಣಶಕ್ತಿ ಎರಡೂ ತುಂಬ ಚುರುಕಾಗಿರುತ್ತವೆ. ಮನುಷ್ಯನ ಚಟುವಟಿಕೆಗಳಿಗೆ ಅಗತ್ಯ ಬೇಕಾದ ಬೆಳಕಿನ ನೂರರಲ್ಲೊಂದು ಪಾಲು (0.00000073 ಫೂಟ್ ಕ್ಯಾಂಡ್ಸ್) ಬೆಳಕು ಇದ್ದರೂ ಗೂಬೆಗಳು ಅಂಥ ಕ್ಷೀಣ ಪ್ರಭೆಯಲ್ಲೂ ತಮ್ಮ ಬೇಟೆಯನ್ನು ಹುಡುಕಿಕೊಳ್ಳುತ್ತವೆ. ಗಿಡುಗಗಳ ದೂರ ದೃಷ್ಟಿಶಕ್ತಿ ಮನುಷ್ಯನದ್ದಕ್ಕಿಂತ ಎಂಟು ಪಟ್ಟು ಹೆಚ್ಚಾಗಿದೆಯೆಂದು ಹೇಳಲಾಗುತ್ತದೆ. ಒಂದು ಮೈಲು ದೂರದಲ್ಲಿರುವ ವಸ್ತುಗಳನ್ನೂ ಅದು ಪತ್ತೆ ಹಚ್ಚುತ್ತದೆ !

ಶ್ರವಣಶಕ್ತಿಯೂ ಅಷ್ಟೆ: ಧ್ವನಿ ತರಂಗಗಳ ತೀವ್ರತೆ ಮತ್ತು ಕ್ಷೀಣತೆಯಲ್ಲಿನ ಅತಿ ಸೂಕ್ಷ್ಮ ವ್ಯತ್ಯಾಸಗಳನ್ನು ಪತ್ತೆ ಹಚ್ಚುವಲ್ಲಿ ಹಾಗೂ ದನಿಯ ಅತಿ ಕ್ಷಿಪ್ರ ಏರಿಳಿತಗಳ ವ್ಯತ್ಯಾಸ ಗುರುತಿಸುವಲ್ಲಿ ಅವು ಮನುಷ್ಯನಿಗಿಂತ ಅದೆಷ್ಟೋ ಪಾಲು ಚುರುಕಾಗಿರುತ್ತವೆ.

ಕೆಲವು ಪಕ್ಷಿಗಳಲ್ಲಿ ವಲಸೆ ಪಯಣವಂತೂ ಅತ್ಯಂತ ಸಾಹಸದ ಪ್ರವೃತ್ತಿಯಾಗಿರುತ್ತದೆ. ಆಹಾರವನ್ನು ಕೊಬ್ಬಿನ ರೂಪದಲ್ಲಿ ಶೇಖರಿಸಿಕೊಂಡು ಅದನ್ನು ಇಂಧನ ಶಕ್ತಿಯನ್ನಾಗಿ ಪರಿವರ್ತಿಸಿ ಅತ್ಯಂತ ದಕ್ಷತೆಯಿಂದ ಬಳಸಿಕೊಂಡು ಸಹಸ್ರಾರು ಕಿಲೋಮೀಟರ್ ದೂರದವರೆಗೆ ವಿಶ್ರಾಂತಿಯಿಲ್ಲದೆ ಕ್ರಮಿಸಬಲ್ಲ ಅಮೋಘ ಶಕ್ತಿ ಅವಕ್ಕಿದೆ. ಎಲ್ಲಕ್ಕಿಂತ ಸೋಜಿಗದ ವಿಷಯವೆಂದರೆ, ಅಷ್ಟು ದೂರಕ್ಕೂ ಅವು ತಮ್ಮ ಸಂಚಾರದ ದಿಕ್ಕನ್ನು ಕರಾರುವಾಕ್ಕಾಗಿ ಗುರುತಿಸಿಕೊಂಡು ಸಾಗುವುದು. ಉತ್ತರ ಗೋಲಾರ್ಧದಿಂದ ಭಾರತಕ್ಕೆ ಬಂದು ಹೋಗುವ ಸೈಬೀರಿಯಾದ ಕೊಕ್ಕರೆ, ಯುರೋಪದ ಸ್ಪೂನ್‌ಬಿಲ್, ಸ್ವಾಲೋ ಹಕ್ಕಿ, ಜೇನು ಡೇಗೆ (ಹನಿ ಬಸಾರ್ಡ್) ಕಲಿಂಗ ಪಕ್ಷಿ (ಶ್ರೈಕ್), ಕಿರುಕೋಗಿಲೆ (ಲೆಸ್ಸರ್ ಕಕ್ಕೂ) ಮುಂತಾದವುಗಳ ಪಯಣದ ಅವಧಿ ಮತ್ತು ಕ್ರಮಿಸುವ ದೂರವನ್ನು ಲೆಕ್ಕ ಹಾಕಿದರೆ ಎಂಥವರಿಗೂ ಸೋಜಿಗವೆನ್ನಿಸಬಹುದಾಗಿದೆ.

ಭಾರತದ ಪಕ್ಷಿ ಸಂಕುಲಗಳ ಸಂಪತ್ತು, ವೈವಿಧ್ಯತೆ ಹಾಗೂ ಸಂಖ್ಯೆ ಎರಡೂ ದೃಷ್ಟಿಯಲ್ಲಿ ಗಮನಾರ್ಹವಾದುದು. ಜಗತ್ತಿನಲ್ಲಿ ಇಂದು ಬದುಕಿರುವ 27 ಪಕ್ಷಿ ಸ್ತರಗಳ ಪೈಕಿ 21 ಸ್ತರಗಳು ಭಾರತದಲ್ಲಿವೆ. ನಮ್ಮಲ್ಲಿ ಒಟ್ಟು 1,200 ವಂಶಗಳಿಗೆ

ಸೇರಿದ ಪಕ್ಷಿಗಳಿವೆ. ಜಗತ್ತಿನಲ್ಲಿ ಒಟ್ಟು 8,600 ವಂಶಗಳಿಗೆ ಸೇರಿದ ಪಕ್ಷಿಗಳಿದ್ದು, ಭಾರತದ ಪಾಲು ಶೇ.14ರಷ್ಟಿದೆ. ಉಪವಂಶಗಳನ್ನೂ, ಅವುಗಳ ಒಳಪ್ರಭೇದಗಳನ್ನೂ ಪರಿಗಣಿಸಿದರೆ ನಮ್ಮಲ್ಲಿ ಜಲಪಕ್ಷಿ ಹಾಗೂ ಭೂಪಕ್ಷಿ ಎರಡೂ ಸೇರಿ 2,060 ಜಾತಿಯ ಪಕ್ಷಿಗಳಿವೆ. ಇವುಗಳಲ್ಲಿ 1,750 ಜಾತಿಯ ಪಕ್ಷಿಗಳು ನಮ್ಮವೇ ಆಗಿದ್ದು ಇನ್ನುಳಿದವು ನಮ್ಮ ಸೀಮೆಯ ಆಚೆಗೂ ಸಂಚರಿಸುವ ವಲಸೆ ಪಕ್ಷಿಗಳಾಗಿವೆ.

ಭಾರತದ ಎಲ್ಲ ಬಗೆಯ ನೈಸರ್ಗಿಕ ಆವಾಸಗಳಲ್ಲೂ ಪಕ್ಷಿಗಳನ್ನು ಕಾಣಬಹುದು. ಕೆರೆ, ನದಿ, ಸರೋವರಗಳಂಥ ನೀರಿನ ತಾಣಗಳಲ್ಲಿ ಹಾಗೂ ಜವುಳು ಪರಿಸರದಲ್ಲಿ ಬಾತು, ಕೊಕ್ಕರೆ, ಬೆಳ್ಳಕ್ಕಿ, ಬಕ, ಹಾವಕ್ಕಿ ಮತ್ತು ಜಕಾನಾಗಳ ವೈವಿಧ್ಯಮಯ ಸಮೂಹಗಳಿವೆ. ಹುಲ್ಲುಗಾವಲುಗಳಲ್ಲಿ ಟಿಟ್ಟಿಭ, ಚಂದ್ರ ಮುಕುಟ, ಗುಂಗುರು ಪಂಚ, ಸೂರಕಿ, ಪಿಕಳಾರ ಹಾಗೂ ಕ್ವೇಲ್‌ಗಳ ಪ್ರಪಂಚವಿದೆ. ಉಷ್ಣವಲಯದ ಕಾಡುಗಳಲ್ಲಿ ಕೊಂಬುಕೊಕ್ಕಿನ ಹಕ್ಕಿ (ಹಾರ್ನ್‌ಬಿಲ್) ಗುಡ್ಡದ ಮೈನಾ, ಹಸಿರು ಪಾರಿವಾಳ, ಬೂದು ಕೋಳಿಗಳು ವಾಸವಾಗಿದ್ದರೆ, ಶುಷ್ಕ ಉದುರೆಲೆ ಅರಣ್ಯಗಳಲ್ಲಿ ಮಿನಿವೆಟ್, ಮರಕುಟಿಗ, ಹಾಲಕ್ಕಿಗಳೂ, ವಾಚಾಳಿ 'ಬ್ಯಾಬ್ಲರ್'ಗಳೂ ಕಂಡುಬರುತ್ತವೆ. ಭಾರತದ ಮರುಭೂಮಿ ಪ್ರದೇಶ ಕೂಡಾ ಪಕ್ಷಿಗಳ ಆಶ್ರಯತಾಣವಾಗಿದೆ. ಬಸ್ಟರ್ಡ್, ಮುನಿಯ, ಪಾರಿವಾಳ, ಕೌರ್ಸರ್, ಮರಳ ಟಿಟ್ಟಿಭ ಇತ್ಯಾದಿಗಳು ಇಲ್ಲಿ ವಾಸಿಸುತ್ತವೆ.

ಆದರೂ ಇತ್ತೀಚೆತ್ತಲಾಗಿ ಪರಿಸರ ಮಾಲಿನ್ಯ, ವಾಸಸ್ಥಾನ ನಾಶ, ಅತಿಕ್ರಮಣವೇ ಮುಂತಾದ ಕಾರಣಗಳಿಂದಾಗಿ ಅನೇಕ ಪಕ್ಷಿಸಂತತಿಗಳು ಅವಸಾನದ ಅಂಚಿಗೆ ಬಂದಿವೆ. ಅವುಗಳ ರಕ್ಷಣೆಗೆ ಮಿತಿಮೀರಿ ಶ್ರಮಿಸಬೇಕಾದ ಕಾಲ ಬಂದಿದೆ.

## ಜೆರ್ಡನ್ಸ್ ಕೌರ್ಸರ್

*Cursorius bitorquatus* (Blyth)

ಪ್ರಪಂಚದ ಅತ್ಯಂತ ಅಪರೂಪದ ಪಕ್ಷಿಗಳಲ್ಲೊಂದಾದ ಜೆರ್ಡನ್ಸ್ ಕೌರ್ಸರ್ ಪೂರ್ತಿ ನಶಿಸಿ ಹೋಗಿದೆಯೆಂದೇ ನಂಬಲಾಗಿತ್ತು. 1900ರಿಂದೀಚೆಗೆ ಅದು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಆದರೆ ಹಠಾತ್ತಾಗಿ ಜನವರಿ 1986ರಲ್ಲಿ ಆಂಧ್ರಪ್ರದೇಶದ ಗೋದಾವರಿ ನದಿ ತೀರದಲ್ಲಿ ಇದನ್ನು ಬಾಂಬೆ ನಿಸರ್ಗ ಚರಿತ್ರಾ ಸಂಘದವರು ಮರುಪತ್ತೆ ಮಾಡಿದರು.

ಈ ಹಕ್ಕಿಗೆ ನಸುಗೆಂಪು ಮತ್ತು ಮರಳ ಬಣ್ಣದ ಪುಕ್ಕಗಳಿವೆ. ದಟ್ಟ ಕಂದು ಎದೆಯ ಮೇಲೆ, ಕುತ್ತಿಗೆ ಸುತ್ತ ಬಿಳಿ ಪಟ್ಟಿ ಇದೆ. ಕುತ್ತಿಗೆಯ ಕೆಳಭಾಗ ಹಾಗೂ ಗಂಟಲು ಬಿಳಿ ಬಣ್ಣದ್ದಾಗಿದ್ದು, ಕಿಬ್ಬೊಟ್ಟೆಯ ಅಡಿ ಬೂದುಬಿಳಿಯ ಛಾಯೆ ಪಡೆದಿದೆ. ಪುಚ್ಛ ಕಪ್ಪು ಮತ್ತು ಬಿಳಿ ಬಣ್ಣದಿಂದ ಕೂಡಿದೆ. ಆಂಧ್ರ ಪ್ರದೇಶದ ಅನಂತಪುರ, ಕಡಪಾ, ನೆಲ್ಲೂರು ಮತ್ತು ಭದ್ರಾಚಲಂ ಜಿಲ್ಲೆಗಳಲ್ಲೂ, ಪಕ್ಕದ ಮಹಾರಾಷ್ಟ್ರದ ಸಿರೊಂಚಾದಲ್ಲೂ ಈ ಕೌರ್ಸರ್ ಪಕ್ಷಿ ಕಂಡುಬಂದಿದೆ.

## ಗ್ರೇಟ್ ಇಂಡಿಯನ್ ಬಸ್ಟರ್ಡ್

*Ardeotis nigriceps* (Vigors)

ಭಾರಿ ಗಾತ್ರದ ಈ ನೆಲವಾಸಿ ಪಕ್ಷಿ (ವರ್ಣಚಿತ್ರ – 16) ಸುಮಾರು ಎಳೇ ಉಷ್ಟ್ರಪಕ್ಷಿಯಷ್ಟು ದೊಡ್ಡದಿದ್ದು, ಹಿಂದೊಂದು ಕಾಲದಲ್ಲಿ ಭಾರತದ ಬಹುತೇಕ ಎಲ್ಲ ಭಾಗಗಳಲ್ಲೂ ಕಂಡುಬರುತ್ತಿತ್ತು – ಅಸ್ಸಾಂ, ಬಂಗಾಳ ಮತ್ತು ಮೈಸೂರಿನ ದಕ್ಷಿಣ ಭಾಗ ಬಿಟ್ಟರೆ. ಈಗ ಇದರ ವಾಸ ರಾಜಸ್ಥಾನ, ಗುಜರಾತ್ ಮತ್ತು ಅಹಮ್ಮದ ನಗರ ಜಿಲ್ಲೆಯ (ಮಹಾರಾಷ್ಟ್ರ) ಶುಷ್ಕ ಹಾಗೂ ಅರೆ ಶುಷ್ಕ ಪ್ರಾಂತಗಳಿಗಷ್ಟೇ ಸೀಮಿತವಾಗಿದೆ. ದಟ್ಟ ಬೂದುಬಣ್ಣದ ಇದರ ರೆಕ್ಕೆಗಳ ಅಂಚಿಗೆ ಕಪ್ಪು ಪಟ್ಟಿಗಳಿವೆ. ಎದ್ದುಕಾಣುವ ಕಪ್ಪು ಗುಚ್ಛ ತಲೆಯ ಮೇಲಿದೆ. ಬಿಳಿ ಮಸಕು ಬಣ್ಣದ ನೀಳ ಕತ್ತು ಹಾಗೂ ಕಿಬ್ಬೊಟ್ಟೆಯ ತಳಭಾಗ ಬಿಳಿ ಬಣ್ಣದಿಂದ ಕೂಡಿರುವುದು ಬಸ್ಟರ್ಡ್ ಪಕ್ಷಿಯ ಮುಖ್ಯ ಲಕ್ಷಣಗಳಾಗಿವೆ.

## ಗ್ರೇಟ್ ಪೈಡ್ ಹಾರ್ನ್ ಬಿಲ್

*Buceros bicornis homrai* Hodgson

ಕೊಂಬಿನಾಕಾರದ ದೊಡ್ಡ ಕೊಕ್ಕುಳ್ಳ ಪಕ್ಷಿಗೆ ಹಾರ್ನ್‌ಬಿಲ್ ಎನ್ನುತ್ತಾರೆ. ಅದು ಎದ್ದುಕಾಣುವ ಕಪ್ಪು ಬಿಳಿ ಮೈ ಬಣ್ಣದ್ದಾಗಿದ್ದರೆ 'ಪೈಡ್' ಹಾರ್ನ್‌ಬಿಲ್ ಎನ್ನುತ್ತಾರೆ. ಇದು ಸುಮಾರು ಹದ್ದಿನ ಗಾತ್ರದ ಪಕ್ಷಿಯಾಗಿದ್ದು ತಲೆಯ ಮೇಲೆ 'U' ಆಕಾರದ ಶಿರಸ್ತ್ರಾಣ ಹೊತ್ತಿರುತ್ತದೆ. ಇದರ ಮುಖ, ಬೆನ್ನು ಹಾಗೂ ಹೊಟ್ಟೆಗಳು ಕಪ್ಪು ಬಣ್ಣದಿದ್ದು ಕುತ್ತಿಗೆ ಮತ್ತು ಕೆಳ ಕಿಬ್ಬೊಟ್ಟೆ ಬೆಳ್ಳಗಿದೆ. ಬಾಲ (ಪುಚ್ಛ)ದ ಮೇಲೆ ಕಪ್ಪು ಅಡ್ಡಪಟ್ಟೆ ಇದೆ.



ಪಶ್ಚಿಮ ಘಟ್ಟಗಳ ಪಟ್ಟಿಯಲ್ಲಿ ಕೇರಳದವರೆಗೂ ಇವುಗಳನ್ನು ಕಾಣಬಹುದು. ಹಣ್ಣು, ಕಾಯಿ, ಬೀಜಗಳನ್ನೂ ಓತಿ, ಹಲ್ಲಿ, ಹಾವು ಹಾಗೂ ಇಲಿಗಳಂಥ ಸಣ್ಣ ಪ್ರಾಣಿಗಳನ್ನೂ ಹಿಡಿದು ತಿನ್ನುವ ಇದು ಹಿಮಾಲಯದ ತಪ್ಪಲಿನ ಅರಣ್ಯಗಳಲ್ಲಿ ಹಾಗೂ ಈಶಾನ್ಯ ಭಾರತದ ದಟ್ಟ ಕಾಡುಗಳಲ್ಲೂ ವಾಸಿಸುತ್ತದೆ.

## ಲಿಖ್ ಫ್ಲೋರಿಕನ್

*Sypheolides indica* (J.F. Miller)

ಲಿಖ್ ಫ್ಲೋರಿಕನ್ ಅಥವಾ ಉಪ ಫ್ಲೋರಿಕನ್ ಪಕ್ಷಿ ಭಾರತದ ಸರಿಸುಮಾರು ಎಲ್ಲ ಭಾಗಗಳಲ್ಲೂ, ಅದರಲ್ಲೂ ವಿಶೇಷವಾಗಿ ಹುಲ್ಲು ಮೈದಾನಗಳಲ್ಲಿ ಹಾಗೂ ದಟ್ಟ ಗಿಡಗಂಟೆಗಳಿದ್ದಲ್ಲಿ ಕಂಡುಬರುತ್ತವೆ. ಆದರೆ ಮಾಂಸಕ್ಕಾಗಿ ಮನುಷ್ಯರು ಇದನ್ನು ಹಿಡಿಯುವುದರಿಂದ ಹಾಗೂ ಕ್ರಮೇಣ ಇವುಗಳ ವಾಸಸ್ಥಾನ ಕಿರಿದಾಗಿರುವುದರಿಂದ ಈಗೀಗ ಇವು ಅಪರೂಪವಾಗುತ್ತಿವೆ. ಸಂತಾನೋತ್ಪತ್ತಿಯ ದಿನಗಳಲ್ಲಿ ಗಂಡುಪಕ್ಷಿಯ ತಲೆಯ ಮೇಲೆ, ಕುತ್ತಿಗೆಯ ಮೇಲೆ ಹಾಗೂ ಹೊಟ್ಟೆ ಭಾಗಗಳಲ್ಲಿ ಕಪ್ಪು ಛಾಯೆಯ ಗರಿಪುಕ್ಕಗಳು ಮೂಡುತ್ತವೆ. ರೆಕ್ಕೆಗಳು ಮರಳಿನ ಬಣ್ಣದವಾಗಿದ್ದು ಅವಕ್ಕೆ ಅಲ್ಲಲ್ಲಿ ಕಪ್ಪು ಚುಕ್ಕೆಗಳಿವೆ. ರೆಕ್ಕೆಯ ಒಳಭಾಗ ಬಿಳಿ. ಜುಟ್ಟಿನ ಗರಿಗಳು ಕಪ್ಪು ಮಾಸಲು. ಹೆಣ್ಣು ಫ್ಲೋರಿಕನ್ ಗಂಡಿಗಿಂತ ದೊಡ್ಡದಾಗಿದ್ದು, ಮನೆ ಗುಬ್ಬಿಯ ಮೈಬಣ್ಣ ಪಡೆದಿದೆ. ಇದಕ್ಕೂ ಇಡೀ ಶರೀರದ ಮೇಲೆ ಕಪ್ಪು ಚುಕ್ಕಿಗಳಿವೆ.



## ಪಶ್ಚಿಮದ ಟ್ರಾಗೋಪನ್

*Tragopan Melanocephalus* (J.E. Gray)

ಒಂದು ಕಾಲದಲ್ಲಿ ಹಿಮಾಲಯದುದ್ದಕ್ಕೂ ಕಂಡುಬರುತ್ತಿದ್ದ ಈ ಬಣ್ಣದ ಹಕ್ಕಿ ಈಗ ಕೇವಲ ಕಾಶ್ಮೀರ ಮತ್ತು ಹಿಮಾಚಲ ಪ್ರದೇಶದ ಕೆಲವು ಭಾಗಗಳಲ್ಲಿ ಮಾತ್ರ ನೋಡ ಸಿಗುತ್ತದೆ. ಟ್ರಾಗೋಪನ್ ಪಕ್ಷಿಗಳು, ಆದರಲ್ಲೂ ವಿಶೇಷವಾಗಿ ಗಂಡುಗಳು ಬಗೆಬಗೆಯ ಬಣ್ಣಗಳಲ್ಲಿ ಕಂಗೊಳಿಸುತ್ತವೆ. ಗರಿಗಳಿಲ್ಲದ ನಿಚ್ಚಳ, ಮುಖಕ್ಕೆ ದಟ್ಟ ಕೆಂಪು ಬಣ್ಣ; ಗಂಟಲು ಮಿರಿ ಮಿರಿ ಮಿಂಚುವ ನೀಲಿ. ಹೆಣ್ಣು ಮಾತ್ರ ಬೂದು ಬಣ್ಣದ್ದಾಗಿದ್ದು ಅಲ್ಲಲ್ಲಿ ಅದಕ್ಕೆ ಕಪ್ಪು ಮತ್ತು ಬಿಳಿ ಚುಕ್ಕೆಗಳಿರುತ್ತವೆ.

## ಹಿಮಾಲಯದ ಮೋನಾಲ್ ಫೆಸಂಟ್

*Lophophonis impejanus* (Latham)

ಹೊಳೆಯುವ ಹಸಿರು ರೆಕ್ಕೆಗಳುಳ್ಳ ಗಂಡು ಮೋನಾಲ್ ಫೆಸಂಟ್ ವರ್ಣರಂಜಿತವಾಗಿದೆ. ತಲೆಯ ಮೇಲೆ ಉದ್ದನ್ನ ಹಸಿರು ಜುಟ್ಟಿದೆ. ಜಾಂಬಳಿ – ನೀಲಿ ಬಣ್ಣದ ಕುತ್ತಿಗೆ ಮತ್ತು ಗಂಟಲಿನೊಂದಿಗೆ ಕಂಗೊಳಿಸುವ ಈ ಪಕ್ಷಿಯ ಜೀವಾಶ್ರಯವೂ ಈಗ ಸಾಕಷ್ಟು ಸಂಕುಚಿತವಾಗಿದೆ. ಹಿಮಾಚಲ ಪ್ರದೇಶದ ಕೆಲವು ಭಾಗಗಳಲ್ಲಿ ಮಾತ್ರ ಇದನ್ನಿಂದು ನೋಡಬಹುದಾಗಿದೆ. ಹೆಣ್ಣು ಫೆಸಂಟ್ ಪಕ್ಷಿಗಳ ಮೈ ಬಣ್ಣ ಕಂದು. ಆದರೆ ಉದ್ದಕ್ಕೂ ತಿಳಿಗಂದು ಮತ್ತು ದಟ್ಟ ಕಂದು ಬಣ್ಣದ ಚುಕ್ಕಿಗಳೂ ಪಟ್ಟಿಗಳೂ ಕಾಣುತ್ತವೆ.

## ಚೀಯರ್ ಫೆಸಂಟ್

*Catreus wallichii* (Hardwicke)

ಉದ್ದ ಬಾಲದ ಈ ಪಕ್ಷಿಯನ್ನು ದೂರದಿಂದಲೂ ಗುರುತಿಸಬಹುದು. ಕಪ್ಪು ಕಂದು ಬಣ್ಣದ ಉದ್ದ ಜುಟ್ಟವೂ ಇದಕ್ಕಿದ್ದು ಬೆನ್ನು ಭಾಗಕ್ಕೆ ಸಮಾನಾಂತರವಾಗಿ ಚಾಚಿಕೊಂಡಿರುತ್ತದೆ. ರೆಕ್ಕೆಗಳು ಬೂದು ಬಿಳಿ ಹಾಗೂ ಮಸಕು ತುಕ್ಕಿನ ಬಣ್ಣದ್ದಾಗಿರುತ್ತವೆ. ನಿರಿಗೆಗಳು ಕಾಣುವ ಚುಕ್ಕಿಗಳು ಹಾಗೂ ಪಟ್ಟೆಗಳು ಇಡೀ ಶರೀರದುದ್ದಕ್ಕೂ ನಿಬಿಡವಾಗಿರುತ್ತವೆ. ಈ ಫೆಸಂಟ್‌ಗಳಲ್ಲಿ ಗಂಡಿಗೂ ಹೆಣ್ಣಿಗೂ ಅಂಥ ವ್ಯತ್ಯಾಸವೇನೂ ಕಾಣುತ್ತಿಲ್ಲ. ಹೆಣ್ಣು , ಗಂಡಿಗಿಂತ ತುಸು ಚಿಕ್ಕದು ಅಷ್ಟೆ.



ಉತ್ತರ ಭಾರತದ ಬಹುತೇಕ ಎಲ್ಲೆಡೆ, ಅಂದರೆ ಕಾಶ್ಮೀರ, ಪಂಜಾಬ, ಹಿಮಾಚಲ ಪ್ರದೇಶ, ಉತ್ತರ ಪ್ರದೇಶದ ಗಢವಾಲ್ ಮತ್ತು ಕುಮಾಂವೋ ಗುಡ್ಡಗಾಡು ಹೀಗೆ ಹಿಂದೊಮ್ಮೆ ವಿಶಾಲ ಭೂಪ್ರದೇಶದಲ್ಲೆಲ್ಲ ವ್ಯಾಪಿಸಿದ್ದ ಚೀಯರ್ ಫೆಸೆಂಟ್‌ಗಳ ಸಂಖ್ಯೆ ಇತ್ತೀಚಿನ ವರ್ಷಗಳಲ್ಲಿ ಹಠಾತ್ತಾಗಿ ಇಳಿಮುಖವಾಗಿದೆ.

## ಸೈಬೀರಿಯದ ಕೊಕ್ಕರೆ

*(ಸೈಬೀರಿಯನ್ ಕ್ರೇನ್) Grus leucogeranus* Pallas

ಜವುಳು ಕೆರೆಗಳ ಪಕ್ಷಿ ಸೈಬೀರಿಯನ್ ಕ್ರೇನ್. (ವರ್ಣಚಿತ್ರ – 17) ಗ್ರೀಫಾರ್ಮಿಸ್ ಸ್ತರಕ್ಕೆ ಸೇರಿದ ಈ ಪಕ್ಷಿಗಳು ಅಷ್ಟೇನೂ ಚುರುಕು ಹಾರಾಟ ನಡೆಸುವುದಿಲ್ಲ. ಆದರೆ ನೀರು ಮತ್ತು ನೆಲದ ಜೀವನಕ್ಕೆ ಅಚ್ಚುಕಟ್ಟಾಗಿ ಹೊಂದಿಕೊಂಡಿವೆ. ಉತ್ತರ ಸೈಬೀರಿಯಾದಿಂದ ಪ್ರತಿ ಚಳಿಗಾಲಕ್ಕೂ ಭಾರತಕ್ಕೆ ವಲಸೆ ಬರುವ ಇದು ನವಂಬರ್ ಕೊನೆಯ ಅಥವಾ ಡಿಸೆಂಬರ್ ಆರಂಭದ ವೇಳೆಗೆ ಉತ್ತರ ಬಿಹಾರ, ಉತ್ತರ ಪ್ರದೇಶದ ಪ್ರಯಾಗ್‌ಪುರ ಸರೋವರ ಹಾಗೂ ಭರತಪುರದ ಕೇವಲದೇವ್ ಘಾನಾ ರಾಷ್ಟ್ರೀಯ ಉದ್ಯಾನ್ಕೆ ಬಂದು ತಂಗುತ್ತದೆ. ಮಾರ್ಚ್ ಕೊನೆ ಅಥವಾ ಏಪ್ರಿಲ್ ಆರಂಭವಾಗುತ್ತಲೇ ಮರಳಿ ಸೈಬೀರಿಯಾಕ್ಕೆ ಪ್ರಯಾಣ ಹೊರಡುತ್ತದೆ.

ಶುಭ್ರ ಬಿಳಿ ಬಣ್ಣದ ಈ ಪಕ್ಷಿಯ ಮುಖ ಮತ್ತು ತಲೆಯ ಅಕ್ಕಪಕ್ಕದ ಭಾಗಗಳು ಕೆಂಪು ಬಣ್ಣದ್ದಾಗಿವೆ. ರೆಕ್ಕೆಯ ಕೆಲವು ಗರಿಗಳು ಕಪ್ಪು. ಇಡೀ ಪ್ರಪಂಚದಲ್ಲಿ ಸೈಬೀರಿಯಾದ ಕೊಕ್ಕರೆ ಸಂಖ್ಯೆ ಕೆಲವೇ ನೂರರಷ್ಟಿದ್ದು, ಇವು ನಿರ್ವಂಶವಾಗದ ಹಾಗೆ ತಡೆಗಟ್ಟಲು ಅಂತರರಾಷ್ಟ್ರೀಯ ಯತ್ನಗಳು ಜಾರಿಯಲ್ಲಿವೆ.

1950 ರಿಂದ ಹಿಡಿದು 70ರವರೆಗೂ ನಮ್ಮ ಭರತ್‌ಪುರದ ರಾಷ್ಟ್ರೀಯ ಉದ್ಯಾನಕ್ಕೆ ಪ್ರತಿವರ್ಷ ನೂರು ಕೊಕ್ಕರೆಗಳು ಬರುತ್ತಿದ್ದವು. ಇತ್ತೀಚೆಗೆ ಇವುಗಳ ಸಂಖ್ಯೆ ಇಳಿಮುಖವಾಗುತ್ತಿದೆ. 1989, 1990, 1991ರಲ್ಲಿ ಕ್ರಮವಾಗಿ ಕೇವಲ 22, 14 ಮತ್ತು 7 ಕೊಕ್ಕರೆಗಳು ಬಂದು ಹೋಗಿವೆ. ದೇಶದ ಈ ಭಾಗದಲ್ಲಿ ಅನಿರ್ದಿಷ್ಟ ಮಳೆ, ಪದೇ ಪದೇ ಬರಗಾಲ ಬರುತ್ತಿರುವುದೇ ಕೊಕ್ಕರೆಗಳ ನಿರಾಸಕ್ತಿಗೆ ಕಾರಣವೆಂದು ಊಹಿಸಲಾಗಿದೆ. ಭರತಪುರದ ಸರೋವರದ ಆಸುಪಾಸಿನಲ್ಲಿ ದನಕರುಗಳನ್ನು ಮೇಯಿಸಕೂಡದೆಂದು ನಿಷೇಧ ಹೇರಿದ್ದರಿಂದ ಜೊಂಡುಹುಲ್ಲು ಇತ್ತೀಚಿನ ದಿನಗಳಲ್ಲಿ ಅತಿಯಾಗಿ ಬೆಳೆದಿದೆ. ನೀರಿನಲ್ಲಿ ಹುದುಗಿರುವ ಬೇರುಕಾಂಡಗಳನ್ನು ಕಿತ್ತು ಎಳೆಯುವುದು ಕೊಕ್ಕರೆಗಳಿಗೆ ಕಠಿಣವಾಗುತ್ತಿದೆ. ಕೊಕ್ಕರೆ ಸಂಖ್ಯೆ ಕಡಿಮೆಯಾಗಲು ಇದೂ ಒಂದು ಕಾರಣವೆಂದು ಹೇಳಲಾಗುತ್ತಿದೆ.

## ಕಪ್ಪು ಕತ್ತಿನ ಕೊಕ್ಕರೆ

*Grus nigrocollis* Przevalski

ಈ ಕೊಕ್ಕರೆಯನ್ನು ಕೇವಲ ಅದರ ಸಂತಾನೋತ್ಪತ್ತಿಯ ದಿನಗಳಲ್ಲಿ ಅದೂ ಏಪ್ರಿಲ್/ಮೇ ತಿಂಗಳಿನಿಂದ ಅಕ್ಟೋಬರ್ ತಿಂಗಳವರೆಗೆ ಲಡಾಖ್‌ನಲ್ಲಿ ಹಾಗೂ ಸೆಪ್ಟೆಂಬರ್‌ನಿಂದ ಮಾರ್ಚ್‌ವರೆಗಿನ ಅವಧಿಯಲ್ಲಿ ಭೂತಾನ್ ಮತ್ತು ಅರುಣಾಚಲ ಪ್ರದೇಶದಲ್ಲಿ ಮಾತ್ರ ನೋಡಬಹುದಾಗಿದೆ. ಸುಮಾರು ಒಂದು ಮೀಟರ್ ಎತ್ತರದ ಈ ಪಕ್ಷಿಯನ್ನು ಗುರುತಿಸುವುದು ಸುಲಭ. ಅಚ್ಚ ಕಪ್ಪಿನ ಕತ್ತು ಮತ್ತು ಉದ್ದನ್ನ

ಕಂದುಕಪ್ಪಿನ ಕಾಲುಗಳು ಇದರ ವಿಶಿಷ್ಟ ಲಕ್ಷಣ. ಒಟ್ಟಾರೆ ಮೈಬಣ್ಣ ಬೂದು ಇದ್ದು, ಪುಚ್ಛದ ಭಾಗವು ಕೆಳಕ್ಕೆ ಬಾಗಿದ ಕಪ್ಪು ಗರಿಗಳಿಂದ ಕೂಡಿದೆ.

ಕಾಳುಕಡಿ, ಗಡ್ಡೆ, ಬೇರು, ಕ್ರಿಮಿಕೀಟ ಮತ್ತು ಚಿಕ್ಕ ಪುಟ್ಟ ಕಶೇರುಕ ಪ್ರಾಣಿಗಳನ್ನು ತಿನ್ನುತ್ತ ಈ ಕೊಕ್ಕರೆ ಜೀವಿಸುತ್ತದೆ. ಲಡ್ದಾಖ್‌ನಲ್ಲಿ ಮರಿಗಳು ಬಲಿತ ಮೇಲೆ ಇದು ಚಳಿಗಾಲದಲ್ಲಿ ಬೆಚ್ಚಗಿನ ಪ್ರದೇಶಕ್ಕೆ ಸಂಸಾರದೊಂದಿಗೆ ವಲಸೆ ಹೋಗುತ್ತದೆ. ಇದರ ಸಂತತಿ ನಿರ್ವಂಶವಾಗುತ್ತಿರುವ ಲಕ್ಷಣ ಕಂಡುಬಂದಿದ್ದರಿಂದ ವನ್ಯ (ಸಂರಕ್ಷಣಾ) ಕಾನೂನಿನ 1ನೇ ಪರಿಚ್ಛೇದದಲ್ಲಿ ಹೆಸರಿಸಿ ಇದಕ್ಕೆ ಕಾನೂನಿನ ಸಂರಕ್ಷಣೆ ನೀಡಲಾಗ್ಗಿದೆ.

ಭಾರತದಲ್ಲಿ ನೋಡಸಿಗುವ 2,100ಪಕ್ಷಿ ವಂಶ ಮತ್ತು ಉಪವಂಶಗಳಲ್ಲಿ ಈವರೆಗೆ ಹೆಸರಿಸಿದವುಗಳಿಗಿಂತ ಅದೆಷ್ಟೋ ಪಾಲು ಹೆಚ್ಚು ಪಕ್ಷಿಗಳು ಕಣ್ಮರೆಯಾಗುವ ಲಕ್ಷಣಗಳು ಕಾಣುತ್ತಿವೆ. ಇವುಗಳ ಆವಾಸ ನಿರ್ನಾಮವಾಗುತ್ತಿದೆ; ವಾಯುಮಾಲಿನ್ಯ, ಜಲಮಾಲಿನ್ಯ ಹೆಚ್ಚುತ್ತಿದೆ; ಪಕ್ಷಿಗಳ ಬೇಟೆ ಹಾಗೂ ಮಾರಾಟ ನಡೆಯುತ್ತಲೇ ಇದೆ. ತೀರಾ ಅಪಾಯದಲ್ಲಿ ಸಿಕ್ಕ ಕೆಲವು ಪಕ್ಷಿಗಳನ್ನು ಹೆಸರಿಸುವುದಾದರೆ – ಬಿಳಿ ರೆಕ್ಕೆಯ ಕಾಡುಬಾತು *Cairina scutulata (Muller),* ಶಿಳ್ಳೆ ಹೊಡೆಯುವ ದೊಡ್ಡ ಬಾತು *Dendrocygna bicolor (Vieillot),* ಅಂಡಮಾನ್ ಬಾತು *Anas gibberifom salbogularis (Hume),* ಹಿಮಾಲಯದ ಚಿನ್ನದ ಗರುಡ (ಗೋಲ್ಡನ್ ಈಗಲ್) *Aqenila Chrysaetos daphanea (Severtzov),* ನಿಕೊಬಾರಿನ ದೊಡ್ಡಪಾದದ ಪಕ್ಷಿ (ಮೆಗಾಪೋಡ್) *Megapodius freycinet (Gaimard)* ಮತ್ತು ಮಲಬಾರಿನ ಕಪ್ಪು – ಬಿಳಿ ಕೊಂಬುಕೊಕ್ಕಿನ ಹಾರ್ನ್‌ಬಿಲ್.

## ಸರೀಸೃಪಗಳು

ನೀರಿನಿಂದ ಮೇಲೆದ್ದು ನೆಲವಾಸಿಗಳಾಗಲು ಬಂದ ಮೊಟ್ಟಮೊದಲ ಕಶೇರುಕ ಜೀವಿಗಳೆಂದರೆ ಈ ಸರೀಸೃಪಗಳೇ ಸರಿ. 26ರಿಂದ 30ಕೋಟಿ ವರ್ಷಗಳ ಹಿಂದೆ, ಅಪ್ಪರ್ ಕಾರ್ಬೋನಿಫೆರಸ್ ಯುಗದಲ್ಲಿ ಉಭಯವಾಸಿ ಜೀವಿಗಳಿಂದ ಇವು ಉಗಮವಾದುವೆಂದು ನಂಬಲಾಗಿದೆ. ಒಣ, ಪೊರೆಯುಳ್ಳ ತ್ವಚೆಯೇ ಇವುಗಳ ಪ್ರಮುಖ ಲಕ್ಷಣವೆನ್ನಬಹುದು. ಹಾಗೆಂದು ಪೊರೆಯುಳ್ಳ ಎಲ್ಲ ಜೀವಿಗಳೂ ಸರೀಸೃಪಗಳೆಂದು ತಿಳಿಯುವುದೂ ತಪ್ಪಾದೀತು. ಸರೀಸೃಪಗಳಿಗೆ ಇಂಗ್ಲಿಷ್‌ನಲ್ಲಿ 'ರೆಪ್ಟೈಲ್ಸ್' ಎನ್ನುತ್ತಾರೆ. ಈ ಹೆಸರು ಲ್ಯಾಟಿನ್ ಮೂಲದ 'ರೆಪ್ಟಿಲಿಸ್' ಅಂದರೆ ಹೊಟ್ಟೆ ಹೊಸೆಯುತ್ತ ಸರಿದಾಡುವ ಪ್ರಾಣಿ ಎಂಬರ್ಥದ ಪದದಿಂದ ಬಂದಿದೆ. ಬಹುತೇಕ ಎಲ್ಲ ಸರೀಸೃಪಗಳೂ ನೆಲದ ಮೇಲೆಯೇ ವಾಸ ಮಾಡುತ್ತವಾದರೂ ಕಡಲಾಮೆಯಂಥ ಕೆಲವು ಸರೀಸೃಪಗಳು ಜೀವಿತದ ಬಹುಪಾಲನ್ನು ನೀರೊಳಗೇ ಕಳೆಯುತ್ತವೆ. ಮೊಟ್ಟೆ ಇಡಲೆಂದು ಮಾತ್ರ ಭೂಮಿಗೆ ಬರುತ್ತವೆ.

ಸರೀಸೃಪಗಳನ್ನು 'ತಂಪು ರಕ್ತದ ಪ್ರಾಣಿ' ಎನ್ನುತ್ತಾರೆ. ಅದರರ್ಥ, ಅವುಗಳ

ದೇಹದ ತಾಪಮಾನ ನಮ್ಮಂತೆ ಸ್ಥಿರವಾಗಿರುವ ಬದಲು ಹೊರಗಿನ ವಾತಾವರಣಕ್ಕೆ ತಕ್ಕಂತೆ ಏರಿಳಿತವಾಗುತ್ತಿರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಸ್ತನಿಗಳೂ, ಪಕ್ಷಿಗಳೂ 'ಬಿಸಿ ರಕ್ತದ ಜೀವಿ' ಎಂದು ಕರೆಸಿಕೊಳ್ಳುತ್ತವೆ. ಇವುಗಳ ತಾಪಮಾನದಲ್ಲಿ ಏರಿಳಿತ ಇರುವುದಿಲ್ಲ. ಸರೀಸೃಪಗಳು ಜೀರ್ಣಿಸಿಕೊಂಡ ಆಹಾರ ತುಂಬ ನಿಧಾನವಾಗಿ ದೇಹದಲ್ಲಿ ಇಂಗುವುದರಿಂದ ಅಲ್ಲಿ ಉತ್ಪತ್ತಿಯಾಗುವ ತಾಪದ ಪ್ರಮಾಣವೂ ಕಡಿಮೆ ಇರುತ್ತದೆ. ಆದ್ದರಿಂದ ಸೂರ್ಯನಿಂದ ಲಭಿಸುವ ಶಾಖವನ್ನು ಆದಷ್ಟು ದಕ್ಷತೆಯಿಂದ ಬಳಸಿಕೊಳ್ಳಬೇಕಾಗುತ್ತದೆ. ಸರೀಸೃಪಗಳು ಬಹುಮಟ್ಟಿಗೆ ಉಷ್ಣವಲಯದ ಭೂಪ್ರದೇಶಗಳಲ್ಲಿ ವಾಸ ಮಾಡುತ್ತವೆ. ಶೀತವಲಯದ ಭೂ ಪ್ರದೇಶಗಳಲ್ಲಿ ವಾಸಿಸುವ ಸರೀಸೃಪಗಳು ಚಳಿಗಾಲ ಬಂದಾಗ ದೀರ್ಘ ನಿದ್ದೆಗೆ ಒಳಪಡುತ್ತವೆ. ನೆಲದ ಮೇಲೆ ಸರೀಸೃಪಗಳ ವಿಕಾಸ ಸಾಧ್ಯವಾಗಲು ಅವುಗಳ ಮೊಟ್ಟೆಯೇ ಕಾರಣವಾಗಿದೆ. ಮೊಟ್ಟೆಯ ಒಳಗೆ ನೀರಿನಂತೇ ತೆಳ್ಳಗಿನ ಭ್ರೂಣದ್ರವ್ಯವಿದ್ದು ಜಲಪರಿಸರದಲ್ಲೇ ಎಲ್ಲ ಬಗೆಯ ಪೋಷಕಾಂಶವೂ ಸಿಗುವಂತಿರುತ್ತದೆ. ಅದನ್ನು ನೆಲದ ಮೇಲೂ ಇಟ್ಟು ಮರಿ ಮಾಡುವ ವ್ಯವಸ್ಥೆ ಬಂದಿದ್ದೇ ಸರೀಸೃಪಗಳ ವಿಕಾಸದ ಬಹು ಮಹತ್ವದ ಹೆಜ್ಜೆಯಾಗಿದೆ. ಈ ಕ್ರಿಯೆಗೆ ಅಗತ್ಯವಾದಂತೆ ಜೀವಿಗಳ ದೇಹದಲ್ಲಿ ಸಂಭೋಗ ಕ್ರಿಯೆ, ಹೆಣ್ಣಿನ ದೇಹದ ಒಳಗೇ ಭ್ರೂಣಕ್ಕೆ ಪೋಷಕಾಂಶಗಳ ಪೂರೈಕೆಯಾಗುವಂಥ ವ್ಯವಸ್ಥೆಯೂ ಬಂದಿದ್ದರಿಂದ ಅವು ಜಲವಾಸಿ ಜೀವಿಗಳಿಗಿಂತ ಹೆಚ್ಚಿನ ಅನುಕೂಲತೆ ಸಾಧಿಸಿದಂತಾಯಿತು. ನೀರಿನ ಮಾಧ್ಯಮವಿಲ್ಲದಿದ್ದರೂ ವಂಶಾಭಿವೃದ್ಧಿ ಸಾಧ್ಯವೆಂಬುದನ್ನು ನಿಸರ್ಗವೇ ತೋರಿಸಿಕೊಟ್ಟಂತಾಯಿತು.

ಇಂದಿಗೆ ಸುಮಾರು 20 ರಿಂದ 71 ಕೋಟಿ ವರ್ಷಗಳ ಹಿಂದಿನ 'ಮೆಸೊಝೊಯಿಕ್' ಯುಗದಲ್ಲಿ ಭೂಮಿಯನ್ನೆಲ್ಲ ಈ ಸರೀಸೃಪಗಳೇ ಆಳುತ್ತಿದ್ದವು. ಡೈನೋಸಾರ್‌ಗಳೆಂಬ ಪೆಡಂಭೂತಗಳ ಆಧಿಪತ್ಯದಲ್ಲಂತೂ ಭೂಮಿಗೆ "ಸುವರ್ಣ ಯುಗ" ಬಂದಿತ್ತೆಂದೇ ಹೇಳಬಹುದು. ಟಿರಾನ್ನೊಸಾರಸ್ ರೆಕ್ಸ್, ಅಲ್ಲೊಸಾರಸ್, ಸ್ಟೆಗೊಸಾರಸ್, ಬ್ರಾಕಿಯೊಸಾರಸ್, ಡಿಪ್ಲೊಡೊಕಸ್, ಬ್ರೊಂಟೊಸಾರಸ್ ಇವೇ ಮುಂತಾದ ದೈತ್ಯ ಉರಗಗಳ ಆಳ್ವಿಕೆಯ ಕಾಲ ಅದಾಗಿತ್ತು. ಸುಮಾರು 14 ರಿಂದ 12 ಕೋಟಿ ವರ್ಷಗಳ ಇವುಗಳ ಆಧಿಪತ್ಯ ಕೊನೆಗೊಂಡ ಮೇಲೆ ಸ್ತನಿ ಪ್ರಾಣಿಗಳ ಉಗಮವಾಯಿತು. ಡೈನೊಸಾರ್‌ಗಳು ಕಣ್ಮರೆಯಾದದ್ದು ಹೇಗೆಂಬ ಬಗ್ಗೆ ಅನೇಕ ವಾದಗಳಿವೆ. ಹವಾಗುಣದಲ್ಲಿ ಹಠಾತ್ ಬದಲಾವಣೆ ಆದುದರಿಂದ, ಸಸ್ಯಗಳ ಆಚ್ಛಾದನೆಯೂ ಬದಲಾಗಿದ್ದರಿಂದ ಡೈನೊಸಾರ್‌ಗಳು ಹೊಸ ಪರಿಸರಕ್ಕೆ ಹೊಂದಿಕೊಳ್ಳಲಾಗದೇ ಅಳಿದವೆಂದು ಕೆಲವರು ಹೇಳುತ್ತಾರೆ. ದೂರದ ಲೋಕದಿಂದ ಭೂಮಿಗೆ ಬಂದಪ್ಪಳಿಸಿದ ಧೂಮಕೇತು ಇಲ್ಲವೆ ಕ್ಷುದ್ರಗ್ರಹವೊಂದು ನುಚ್ಚುನೂರಾಗಿ ಧೂಳೆಬ್ಬಿಸಿದ್ದರಿಂದ ಶತಮಾನಗಳ ಕಾಲ ಇಲ್ಲಿನ ಹವಾಗುಣ ವಿಷಮವಾಗಿದ್ದೇ ಈ ದೈತ್ಯೋರಗಗಳ ಅವನತಿಗೆ ಕಾರಣವೆಂದು ಇನ್ನೊಂದು ವಾದ ಇದೆ. ಸ್ತನಿ ಪ್ರಾಣಿಗಳು ಆಗಲೇ ವಿಕಾಸಗೊಳ್ಳುತ್ತಿದ್ದುದರಿಂದ ಡೈನೊಸಾರ್‌ಗಳ ಮೊಟ್ಟೆಗಳ ಭಕ್ಷಿಸಿ ಬದುಕುವ ಹೊಸ ಜೀವಿಗಳೇ ಈ ದೈತ್ಯರ

ವಂಶದ ನಿರ್ನಾಮಕ್ಕೆ ಕಾರಣವೆಂದೂ ಹೇಳಲಾಗುತ್ತದೆ. ನಿಜಕ್ಕೂ ಏನಾಯಿತೆಂಬ ಬಗ್ಗೆ ಎಲ್ಲೂ ಖಚಿತ ದಾಖಲೆ ಸಿಕ್ಕಿಲ್ಲ. ನಮ್ಮ ಜೀವಿತ ಕಾಲದಲ್ಲಿ ಅವು ನಮ್ಮೊಂದಿಗಿಲ್ಲವಲ್ಲ ಎಂಬುದೇ ನಮಗೆ ಅತ್ಯಂತ ಖೇದದ ಸಂಗತಿಯಾಗಿದೆ.

ಹಿಂದಿನ ಕಾಲದಲ್ಲಿ ಸರೀಸೃಪಗಳ 16 ಪಂಗಡಗಳಿದ್ದವು. ಇಂದು ಕೇವಲ ನಾಲ್ಕು ಉಳಿದಿವೆ: ಆಮೆಗಳು, ಮೊಸಳೆಗಳು, ಟುವಟಾರಗಳು ಹಾಗೂ ಹಾವು – ಹಲ್ಲಿಗಳು ಅಷ್ಟೆ. ಭಾರತದಲ್ಲಿ ಈ ನಾಲ್ಕೂ ಗುಂಪಿಗೆ ಸೇರಿದ 420 ಕ್ಕೂ ಹೆಚ್ಚು ಉರಗ ವಂಶಗಳಿವೆ. ಈ ಸಮೃದ್ಧಿಯ ನಡುವೆಯೇ ಸರೀಸೃಪಗಳ ಬೇಟೆಯಾಡುವವರ ಹಾಗೂ ಅವುಗಳ ಮೈ ಚರ್ಮ ಸುಲಿದು ಕಳ್ಳಸಾಗಣೆ ಮಾಡುವವರ ಹಾವಳಿಯೂ ಅತಿಯಾಗಿದ್ದು, ಅನೇಕ ಉರಗ ವಂಶಗಳು ಇಂದು ಅವಸಾನ ಸ್ಥಿತಿಯಲ್ಲಿವೆ. ಅಪಾಯದ ಅಂಚಿಗೆ ಬಂದ ಕೆಲವೇ ಸರೀಸೃಪ ವಂಶಗಳ ಉದಾಹರಣೆಗಳನ್ನು ಇಲ್ಲಿ ಕೊಡಲಾಗುತ್ತಿದೆ.

## ಆಮೆಗಳು

ಸರೀಸೃಪಗಳ ಚೆಲೊನಿಯಾ (Chelonia) ಸ್ತರದಲ್ಲಿ ಆಮೆಗಳನ್ನು (ಟರ್ಟಲ್ಸ್) ವರ್ಗೀಕರಿಸಲಾಗಿದೆ. ಕಡಲಾಮೆಗಳು, ಸಿಹಿನೀರಿನ ಆಮೆಗಳು, ಸಿಹಿ ನೀರಿನ ಕೂರ್ಮಗಳು (ಟಾರ್ಟಾಯ್ಸ್) ಮತ್ತು ನೆಲವಾಸಿ ಕೂರ್ಮಗಳು ಈ ಸ್ತರದಲ್ಲಿ ಬರುತ್ತವೆ. ಇವುಗಳ ಪ್ರಮುಖ ಲಕ್ಷಣವೆಂದರೆ ಕವಚ. ಈ ಕವಚದಲ್ಲಿ ಬಾಗಿದ ಬೆನ್ನು ಚಿಪ್ಪು ಹಾಗೂ ಚಪ್ಪಟೆ ಹೊಟ್ಟೆ (ತಳ) ಚಿಪ್ಪು ಎಂಬ ಎರಡು ಭಾಗಗಳಿವೆ. ಕವಚದ ಒಳಭಾಗವು ಮೂಳೆದ್ರವ್ಯದಿಂದಾದ ತಟ್ಟೆಗಳಾಗಿದ್ದು, ಹೊರಭಾಗವು ಕೊಂಬಿನ ದ್ರವ್ಯದಿಂದಾಗಿದೆ. ಈ ಕವಚದ ಒಳಗೆ ಪ್ರಾಣಿ ಕೂತಿದ್ದು, ಅದರ ಕುತ್ತಿಗೆ, ಕಾಲು ಮತ್ತು ಬಾಲದ ಭಾಗ ಮಾತ್ರ ಹೊರಕ್ಕೆ ಇಣುಕುತ್ತಿರುತ್ತದೆ. ಒಂದರ್ಥದಲ್ಲಿ ಚೆಲೊನಿಯಾಗಳೆಲ್ಲ ಪೆಟ್ಟಿಗೆಯೊಳಗಿನ ಜೀವಿಗಳೆಂದೇ ಹೇಳಬಹುದು.

ಇವುಗಳ ಆಹಾರಾಭ್ಯಾಸ ಏಕರೂಪವಾಗಿಲ್ಲ. ಕೆಲವು ಶುದ್ಧ ಶಾಕಾಹಾರಿಗಳಾಗಿದ್ದು, ಇನ್ನು ಕೆಲವು ಸಸ್ಯ – ಪ್ರಾಣಿ ಎರಡನ್ನೂ ಭಕ್ಷಿಸುತ್ತವೆ. ಹೊರನೋಟದಿಂದ ಗಂಡು ಹೆಣ್ಣುಗಳನ್ನು ಗುರುತಿಸುವುದು ಸುಲಭವಲ್ಲ. ಆದರೂ ಗಂಡಿಗೆ ಸಾಮಾನ್ಯವಾಗಿ ಬಾಲ ಕೊಂಚ ಉದ್ದವಾಗಿದ್ದು, ಚಿಪ್ಪಿನ ತಳಭಾಗ ಒಳಕ್ಕೆ ಬಾಗಿರುತ್ತದೆ. ಹೆಣ್ಣು ಆಮೆ ನೆಲದಲ್ಲಿ ಹೊಂಡ ತೋಡಿ ಮೊಟ್ಟೆಗಳನ್ನಿಟ್ಟು ಮಣ್ಣು ಮುಚ್ಚುತ್ತದೆ. ಸಮುದ್ರವಾಸಿ ಆಮೆಗಳಲ್ಲಿ ಬಹುತೇಕವಾಗಿ ಮೊಟ್ಟೆ ಬಲಿತು ಮರಿಯಾಗಲು 40ರಿಂದ 70ದಿನಗಳು ಬೇಕಾಗುತ್ತವೆ. ಚೆಲೋನಿಯಾಗಳು ದೀರ್ಘಕಾಲ ಜೀವಿಸುತ್ತವೆ. ಹಿಂದೂ ಮಹಾಸಾಗರದ ಸೇಶೆಲ್ಸ್ ದ್ವೀಪಗಳಲ್ಲಿನ ದೊಡ್ಡ ಕಡಲಾಮೆಗಳು (ಜಿಯೋಕೆಲೋನಿ ಜೈಜಾಂಟಿಯಾ) 152 ವರ್ಷಗಳ ಕಾಲ ಜೀವಿಸಿದ ದಾಖಲೆಯಿದೆ. ಈಗೀಗ ಕಡಲ ತೀರಗಳ ಮಾಲಿನ್ಯ ಅತಿಯಾಗುತ್ತಿದೆ; ಮೊಟ್ಟೆಗಳನ್ನು ಎಗರಿಸುವವರ ಹಾವಳಿ ಹೆಚ್ಚುತ್ತಿದೆ; ಆಮೆಯ ಮಾಂಸದ ಸಾರಿನ ರುಚಿ ಕಂಡವರು ಕಡಲಾಮೆಗಳನ್ನು ಬೇಟೆಯಾಡುತ್ತಾರೆ; ಅಲಂಕಾರಿಕ ಸಾಮಗ್ರಿಗಳ ತಯಾರಿಕೆಗೆಂದು ಅವುಗಳ

ಚಿಪ್ಪುಗಳನ್ನು ಎತ್ತೊಯ್ಯುತ್ತಾರೆ. ಈ ಎಲ್ಲ ಕಾರಣಗಳಿಂದಾಗಿ ಆಮೆಗಳ ಅನೇಕ ವಂಶಗಳು ಕಣ್ಮರೆಯಾಗುತ್ತಿವೆ.

## ಚರ್ಮದ ಬೆನ್ನಿನ ಆಮೆ

*(ಲೆದರ್‌ಬ್ಯಾಕ್ ಟರ್ಟಲ್) Dermochelys Coriacea* (Linnaeus)

ಇವು ಪ್ರಪಂಚದ ಅತಿ ದೊಡ್ಡ ಆಮೆಗಳು. ಹಿಂದೂ ಮಹಾಸಾಗರದಲ್ಲಿ ಜೀವಿಸುವ ಈ ಜಾತಿಯ ಒಂದೊಂದು ಆಮೆಯೂ 400ರಿಂದ 700 ಕಿಲೊ ತೂಕದ್ದಾಗಿರುತ್ತದೆ. ಇವುಗಳ ಗಟ್ಟಿ ಚರ್ಮದಂಥ ಕವಚಗಳಿಂದಾಗಿ, ಆಧುನಿಕ ಆಮೆಗಳಲ್ಲೇ ಇವು ಅತ್ಯಂತ ಪುರಾತನವೆಂದು ಹೇಳಲಾಗುತ್ತದೆ. ಈ ಚರ್ಮದ ಕವಚದಲ್ಲಿ ಅಲ್ಲಲ್ಲಿ ಮೂಳೆಗಳೂ ಇವೆಯಾದ್ದರಿಂದ ಬಹುಕಾಲದ ಹಿಂದಿನ ಮೂಲ ಮೂಳೆಕವಚದ ಆಮೆಗಳ ಸಂತತಿಯೇ ಇವೆಂದು ಹೇಳಬಹುದಾಗಿದೆ. ಇದರ ಕವಚದ ಬೆನ್ನುಭಾಗ ನುಣುಪಾದ ರಬ್ಬರಿನಂತಿದ್ದು ಕುತ್ತಿಗೆಯಿಂದ ಬಾಲದವರೆಗೂ ಅದಕ್ಕೆ ಉದ್ದುದ್ದ ದಿಬ್ಬಗಳಿವೆ. ಉದ್ದನ್ನ ತ್ರಿಕೋನಾಕೃತಿಯ ಶರೀರ, ದೊಡ್ಡ ತಲೆ ಹಾಗೂ ದಪ್ಪ ಕತ್ತು ಈ ಪ್ರಾಣಿಯ ಪ್ರಮುಖ ಲಕ್ಷಣಗಳು. ದೋಣಿಯ ಹುಟ್ಟಿನಂತಿರುವ ಕಾಲುಗಳಲ್ಲಿ ಮುಂಗಾಲುಗಳು ಉದ್ದ ತ್ರಿಕೋನಾಕೃತಿಯಲ್ಲಿದ್ದು, ಹಿಂಗಾಲುಗಳು ಅಗಲವಾಗಿ ಬಾಲಕ್ಕೆ ಅಂಟಿಕೊಂಡಿರುವಂತಿವೆ. ಬೆನ್ನಿನ ಭಾಗ ತೆಳು ಬೂದು ಬಣ್ಣದ ಪಾಟಿಯಂತಿದ್ದು ಅಲ್ಲಲ್ಲಿ ಅದಕ್ಕೆ ಬಿಳಿ ಚುಕ್ಕಿಗಳಿರುತ್ತವೆ. ತಳದ (ಹೊಟ್ಟೆ) ಭಾಗ ನಸುಗೆಂಪು. ಕಪ್ಪು ಬಿಳಿ, ಕೆಲವೊಮ್ಮೆ ಗುಲಾಬಿ ಅಥವಾ ನೀಲಿ ಬಣ್ಣದ ಚುಕ್ಕಿಗಳು ಹೊಟ್ಟೆ ಭಾಗದಲ್ಲಿ ಕಾಣುತ್ತವೆ. ಬಾಲ ಕಪ್ಪು.



ಚರ್ಮದ ಬೆನ್ನಿನ ಆಮೆಗಳ ಮುಖ್ಯ ಆಹಾರವೆಂದರೆ ಜಲವಾಸಿ ಅಕಶೇರುಕಗಳು, ಮೀನುಗಳು ಮತ್ತು ಜಲಸಸ್ಯ. ಸಾಮಾನ್ಯವಾಗಿ ಉಷ್ಣವಲಯದಲ್ಲಿ ಇವು ಬದುಕುತ್ತವಾದರೂ, ಆರ್ಕ್ಟಿಕ್ ಹಿಮಸಾಗರ ಬಿಟ್ಟರೆ ಇತರ ಶೀತವಲಯದ ಸಮುದ್ರಗಳಲ್ಲೆಲ್ಲ ಇವು ಕಾಣಸಿಗುತ್ತವೆ. ನೀರಿನಲ್ಲಿ ಚುರುಕಾಗಿ ಚಲಿಸುವ ಇವು ನೆಲಕ್ಕೆ ಬಂದಾಗ ಭಾರೀ ನಿಧಾನ.

ಇತರೆಲ್ಲ ಜಲವಾಸಿ ಆಮೆಗಳ ಹಾಗೆ ಇದೂ ಕೂಡಾ ಮೊಟ್ಟೆ ಇಡಲೆಂದು ದಂಡೆಗೆ ಬಂದಾಗ ತುಂಬ ಅಪಾಯ ಎದುರಿಸಬೇಕಾಗುತ್ತದೆ. ನೀರಿನಿಂದ ಹೊರಬೀಳುವಾಗ

ಅದು ತನ್ನ ಮೈಮೇಲೆ ಮಣ್ಣು ಮರಳನ್ನು ಎರಚಿಕೊಂಡು, ವೈರಿಗಳ ಕಣ್ಣಿಗೆ ಕಾಣಿಸದಂತೆ ಬರಲು ಯತ್ನಿಸುತ್ತದೆ. ಮರಳಿನಲ್ಲಿ ದೊಡ್ಡ ಹೊಂಡ ಮಾಡಿ ಅದರಲ್ಲಿ ಮೊಟ್ಟೆಗಳನ್ನಿಟ್ಟು ಮುಚ್ಚುತ್ತದೆ. ಹೆಜ್ಜೆ ಗುರುತು ಒಂದೇ ಕಡೆ ಕಾಣದಂತೆ ಆಚೆ ಈಚೆ ಸುತ್ತಾಡುತ್ತದೆ. ಮೊಟ್ಟೆ ಇಟ್ಟ ತಾಣದಲ್ಲಿ ಘಾಟು ವಾಸನೆ ಹಬ್ಬಿಸಿ, ಹಿಂದಿರುಗುತ್ತದೆ. ಮೊಟ್ಟೆ ಒಡೆದು ಮರಿಗಳು ಹೊರ ಬಂದಾಗ ತಾಯಿಯ ನೆರವಿಲ್ಲದೆ ಅವು ತಾವಾಗಿ ನೀರಿನತ್ತ ಸಾಗುತ್ತವೆ.

ಮೇ–ಜೂನ್ ತಿಂಗಳು ಇವುಗಳ ಸಂತಾನವೃದ್ಧಿಯ ಶೃಂಗಕಾಲ ಎನ್ನಬಹುದು. ಆಗ ಒಂದೊಂದು ಆಮೆ 90–200 ಮೊಟ್ಟೆಗಳನ್ನಿಡುತ್ತದೆ. ಮನ್ನಾರ್ ಆಖಾತದ ಬಳಿ ಇರುವ ದ್ವೀಪಗಳಲ್ಲಿ, ಮತ್ತು ಅಂಡಮಾನ್ ದ್ವೀಪಸ್ತೋಮದಲ್ಲಿ ಇವು ಮೊಟ್ಟೆ ಇಡುವ ಪ್ರಶಸ್ತ ಸ್ಥಾನಗಳಿವೆ. ಅಲ್ಲಿಗೂ ಮೊಟ್ಟೆ ಸಂಗ್ರಾಹಕರಿಂದ ಮತ್ತು ಸಮುದ್ರ ಮಾಲಿನ್ಯದಿಂದಾಗಿ ಚರ್ಮದ ಬೆನ್ನಿನ ಆಮೆಗಳು ಅಪರೂಪವಾಗುತ್ತಿವೆ.

## ಹಸಿರು ಕಡಲಾಮೆ

*(ಗ್ರೀನ್ ಸೀ ಟರ್ಟಲ್) Chelonia mydas* (Linnaeus)

ಉಷ್ಣವಲಯ ಹಾಗೂ ಸಮಶೀತೋಷ್ಣ ವಲಯದ ಎಲ್ಲಾ ಸಾಗರಗಳಲ್ಲೂ ವ್ಯಾಪಕ ಪ್ರಮಾಣದಲ್ಲಿ ಕಾಣಸಿಗುವ ಈ ಆಮೆ 150ರಿಂದ 175ಕಿಲೊ ತೂಗುತ್ತದೆ. ಪ್ರೌಢ ಆಮೆಗಳ ಮೈ ಬಣ್ಣ ಹಸಿರು ಮತ್ತು ಕಂದು. ಬೆನ್ನ ಮೇಲೆ ಕಂದು ಕಪ್ಪು ಬಣ್ಣದ ತೇಪೆ, ಗೀರು ಇಲ್ಲವೆ ಚುಕ್ಕಿಗಳಿರುತ್ತವೆ. ಹೊಟ್ಟೆಯ ಭಾಗ ಎಳೆ ಹಳದಿ. ತಲೆ ಚಿಕ್ಕದಿದ್ದು ಗೋಲಾಕಾರ. ಪುಟ್ಟ ಮೂತಿ. ಮುಂಗಾಲಿನಂತಿರುವ ಬೀಸು ರೆಕ್ಕೆಗಳು ಉದ್ದ. ಹಸಿರಾಮೆಯ ಇಡೀ ನುಣುಪು ದೇಹ ಚಪ್ಪಟೆಯಾಗಿದ್ದು ಸರಿಸುಮಾರು ಹೃದಯದ ಆಕಾರದಲ್ಲಿರುತ್ತದೆ. ಇದರ ಚಿಪ್ಪು ಅಷ್ಟೇನೂ ಗಟ್ಟಿಯದಲ್ಲ.

ಭಾರತದಲ್ಲಿ ಗುಜರಾತಿನ ಸೌರಾಷ್ಟ್ರದ ಕಡಲ ತೀರ ಮತ್ತು ಅಂಡಮಾನ್ ದ್ವೀಪಗಳಲ್ಲಿ ಕಡಲ ಕಿನಾರೆಯ ಬಂಡೆಗಲ್ಲುಗಳ ಮಧ್ಯೆ ಮತ್ತು ಮರಳ ತಡಿಯಲ್ಲಿ ಇವು ಬಿಸಿಲು ಕಾಯಿಸುವುದನ್ನು ಕಾಣಬಹುದು. ಮರಳಿನ ತಗ್ಗು ಹೊಂಡಗಳಲ್ಲಿ ಹೆಣ್ಣು ಹಸಿರಾಮೆ 350ರಿಂದ 600ಮೊಟ್ಟೆಗಳನ್ನಿಟ್ಟು ಮುಚ್ಚುತ್ತದೆ. ಮುಂದೆ 40-50 ದಿನಗಳ ನಂತರ ಮರಿಗಳು ಹೊರಬರುತ್ತವೆ. ಹಸಿರಾಮೆಗಳ ಮಾಂಸ ಮತ್ತು ಮೊಟ್ಟೆ ಎರಡಕ್ಕೂ ಬೇಡಿಕೆ ಇರುವುದರಿಂದ ಇವುಗಳ ಸಂತತಿ ವಿನಾಶದ ಅಂಚಿನಲ್ಲಿದೆ. ಅವುಗಳ ವಲಸೆ ಹವ್ಯಾಸ, ಸಂತಾನವೃದ್ಧಿ ನಡವಳಿಕೆ ಹಾಗೂ ಮೊಟ್ಟೆ ಪೊಟರೆಗಳ ನಿವೇಶನಗಳ ಬಗ್ಗೆ ಪೂರ್ತಿ ಮಾಹಿತಿ ಇನ್ನೂ ಲಭಿಸಿಲ್ಲದ ಕಾರಣ ಹಸಿರು ಕಡಲಾಮೆಗಳ ಸಂರಕ್ಷಣಾ ಕಾರ್ಯ ತೃಪ್ತಿಕರವೆನ್ನುವಷ್ಟು ಪ್ರಗತಿ ಕಂಡಿಲ್ಲ.

## ಕೂರ್ಮ ಕವಚದ ಆಮೆ

*(ಟಾರ್ಟಾಯಿಸ್ ಶೆಲ್ ಟರ್ಟಲ್) Eretmochelys imbricata* (Linnaeus)

ಕಡಲಾಮೆಗಳಲ್ಲೇ ಇದು ಅತ್ಯಂತ ಚಿಕ್ಕದು. ತೂಕ 60 ರಿಂದ 140

ಕಿಲೋಗಳಷ್ಟಿರುತ್ತದೆ. ಗೀರು ಗೀರಿನ ಕಿರಿದಾದ ಕವಚದ ಬೆನ್ನ ಮೇಲೆ ಗುರಾಣಿಯಂಥ ತೇಪೆಗಳಿರುತ್ತವೆ. ಈ ಆಮೆಯ ಕತ್ತೂ ಕಿರಿದಾಗಿದ್ದು, ಹದ್ದಿನ ಕೊಕ್ಕಿನಂಥ ಚೂಪಾದ ಮೂತಿಯೇ ಇದರ ಪ್ರಮುಖ ಚಹರೆ. ರಾಳದ ಮೈ ಬಣ್ಣವಿದ್ದು, ಗುರಾಣಿಗಳ ಮಧ್ಯೆ ಅಷ್ಟದಿಕ್ಕಿಗೆ ಟಿಸಿಲೊಡೆದ ಗೀರುಗಳು ಕಪ್ಪು ಕಂದಿನ ಬಣ್ಣದವಾಗಿರುತ್ತವೆ. ಕಿಬ್ಬೊಟ್ಟೆಯ ಬಣ್ಣ ಹಳದಿ ಕಿತ್ತಳೆ, ಅಥವಾ ಕೆಂಪಾಗಿರುತ್ತದೆ.

ಜಗತ್ತಿನ ಅನೇಕ ಸಾಗರಗಳ ಬೆಚ್ಚಗಿನ ಭಾಗಗಳಲ್ಲಿ ಕಾಣಸಿಗುವ ಇದು ವಿಶೇಷವಾಗಿ ಅಂಡಮಾನ್ ನಿಕೊಬಾರ್ ದ್ವೀಪ ಸಮೂಹಗಳ ಬಳಿ ವಾಸಿಸುತ್ತದೆ. ಎಲ್ಲ ಬಗೆಯ ಸಾಗರ ಅಕಶೇರುಕಗಳನ್ನೂ ಮೀನುಗಳನ್ನೂ ಇದು ತಿನ್ನುತ್ತದೆ. ಅಲಂಕಾರಿಕ ಸಾಮಗ್ರಿಗಳಿಗೆಂದು ಇದರ ಸುಂದರ ಕವಚವನ್ನು ಬೇಟೆಯಾಡುವವರಿಂದಾಗಿ ಈ ಕೂರ್ಮಕವಚದ ಕಡಲಾಮೆಯೂ ನಿರ್ವಂಶವಾಗುವ ಭೀತಿ ಇದೆ.

## ಮೊಸಳೆಗಳು

ಸರೀಸೃಪಗಳ 'ಕ್ರೊಕೊಡೀಲಿಯಾ' ಸ್ತರದಲ್ಲಿ ಮೊಸಳೆ, ನೆಗಳು (ಅಲ್ಲಿಗೇಟರ್) ಮತ್ತು ಘಡಿಯಾಲ್‌ಗಳು ಬರುತ್ತವೆ. ಹದಿನಾರು ಕೋಟಿ ವರ್ಷಗಳ ಹಿಂದಿನ ಸರೀಸೃಪಗಳ 'ಸುವರ್ಣಯುಗ'ದ ಲಾಗಾಯ್ತು ಇವು ತಮ್ಮ ರೂಪ ಆಕಾರಗಳಲ್ಲಾಗಲೀ ಹವ್ಯಾಸಗಳಲ್ಲಾಗಲೀ ಕೊಂಚವೂ ಬದಲಾಗದೇ ತಮ್ಮ ಅಸ್ತಿತ್ವವನ್ನು ಹಾಗೆಯೇ ಉಳಿಸಿಕೊಂಡು ಬಂದಿವೆ. ಇವುಗಳನ್ನು ನೋಡಿದರೆ ಈಗಲೂ ಆ ಹಿಂದಿನ ದೈತ್ಯೋರಗಗಳ ಕಾಲದ ಕವಚಧಾರಿ, ಕ್ರೂರ ಕಣ್ಣುಗಳ ಪ್ರಾಣಿಗಳದ್ದೇ ನೆನಪು ಬರುತ್ತದೆ.

ನೀರಿನ ವಾಸಕ್ಕೆ ಹೇಳಿ ಮಾಡಿಸಿದ ದೇಹ ಈ ಎಲ್ಲ ಮೊಸಳೆ ಜಾತಿಯ ಪ್ರಾಣಿಗಳದ್ದಾಗಿದೆ. ಉದ್ದ ಮೂತಿಯ ತುತ್ತ ತುದಿಗೆ ಮೂಗು ಇರುವುದರಿಂದ ಅದೊಂದನ್ನು ಮಾತ್ರ ನೀರಿನ ಹೊರಗಡೆ ಚಾಚಿ, ದೇಹದ ಉಳಿದೆಲ್ಲ ಭಾಗಗಳನ್ನು ನೀರೊಳಗೇ ಅವಿತು ಸಾಗಬಹುದಾಗಿದೆ. ನೀರಿನಲ್ಲಿ ಮುಳುಗಿದಾಗ, ಕಿವಿ ಮೂಗು ಎರಡನ್ನೂ ಮುಚ್ಚಲು ಸಾಧ್ಯವಾಗುವಂಥ ಪಟಲಗಳು ಇವಕ್ಕಿವೆ. ಕಣ್ಣಿಗೆ ಎರಡೆರಡು ರೆಪ್ಪೆಗಳಿವೆ. ನೀರಿನಲ್ಲಿ ಮುಳುಗಿರುವಾಗಲೂ ಮಸುಕುಮಸಕಾಗಿ ಅಲ್ಲಿನ ದೃಶ್ಯಗಳು ಕಾಣುವಂತೆ ಕಣ್ಣಿಗೆ ಮೊದಲ ಹಾಸಿನ ತೆಳುವಾದ ರೆಪ್ಪೆಯನ್ನು ಮುಚ್ಚಿಕೊಳ್ಳಬಹುದಾಗಿದೆ. ಉದ್ದನ್ನ ನಾವೆಯಂಥ ಶರೀರ, ಹುಟ್ಟು ಹಾಕಲು ಸಹಾಯಕವಾದ ಗಿಡ್ಡ ಕೈಕಾಲುಗಳು ಹಾಗೂ ಶರೀರವನ್ನು ಬೇಕೆಂದ ಹಾಗೆ ತಿರುಗಿಸಲು ಅನುವಾಗುವ ಉದ್ದನ್ನ ಬಾಲ, ಈ ಎಲ್ಲವೂ ಇಡೀ ದೇಹಕ್ಕೆ ಪೂರಕವಾಗಿವೆ. ಕಪ್ಪು ಬೂದು ಬಣ್ಣದ ಮೈಮೇಲೆಲ್ಲ ಮೂಳೆ ಚಿಪ್ಪುಗಳಿವೆ. ನೆಲದ ಮೇಲೆ ಕಾಲೂರಿ ಇಲ್ಲವೆ ಹೊಟ್ಟೆ ಹೊಸೆಯುತ್ತ ಇವು ಚಲಿಸುತ್ತವೆ.

ಮಕರ ಗುಂಪಿನ ಪ್ರಾಣಿಗಳ ಘ್ರಾಣಶಕ್ತಿ, ಶ್ರವಣಶಕ್ತಿ ಹಾಗೂ ದೃಷ್ಟಿ ಸಾಕಷ್ಟು ಚುರುಕಾಗಿರುತ್ತದೆ. ವಾಸನೆ ಗ್ರಹಣಕ್ಕೆಂದೇ ಅವುಗಳಲ್ಲಿ ಎರಡು ಜೋಡಿ ಗ್ರಂಥಿಗಳು

ವಿಕಾಸವಾಗಿವೆ. ಒಂದು ಜೋಡಿ ಗ್ರಂಥಿಗಳು ಗಂಟಲಿನಲ್ಲಿದ್ದರೆ ಇನ್ನೊಂದು ಜೋಡಿ ಮೂಗಿನ ನಾಳದಲ್ಲಿವೆ. ಸಂತಾನೋತ್ಪತ್ತಿಯ ಋತುಗಳಲ್ಲಿ ಈ ಗ್ರಂಥಿಗಳಿಂದ ಘಾಟು ವಾಸನೆಯ ಅಂಟು ಜಿನುಗುತ್ತದೆ. ನೆಲದ ಮೇಲೆ ಇಲ್ಲವೆ ನೀರಿನಲ್ಲಿ ಅಂಟಿನ ರಸವನ್ನು ಜಿನುಗಿಸುತ್ತವೆ. ಹೆಣ್ಣುಗಳು ಗಟ್ಟಿ ಕವಚದ ಮೊಟ್ಟೆಗಳನ್ನು ಮಣ್ಣಿನಲ್ಲಿಟ್ಟು ಮುಚ್ಚುತ್ತವೆ. ಕಾವು ಕೊಡುವ ತಾಣದಲ್ಲಿ ತಾಯಿ ಮೊಸಳೆ ಕಾವಲಿರುತ್ತದೆ; ಮೊಟ್ಟೆ ಬಲಿತಾಗ ಮರಿಗಳು ಹೊರಕ್ಕೆ ಬರಲು ಸುಲಭವಾಗುವಂತೆ ತಾಯಿಯೇ ಮೊಟ್ಟೆಯ ಕವಚವನ್ನು ಕಚ್ಚಿ ಒಡೆಯುತ್ತದಲ್ಲದೆ, ಮರಿಗಳನ್ನು ಜಾಗರೂಕವಾಗಿ ತನ್ನ ಬಾಯೊಳಗಿಟ್ಟು ನೀರಿಗೆ ಒಯ್ದು ಬಿಡುತ್ತದೆ. ಬೇರೆ ಪ್ರಾಣಿಗಳ ಬಾಯಿಗೆ ಮರಿಗಳು ಸಿಗದಂತೆ ಮುಂದೆ ಕೆಲಕಾಲ ರಕ್ಷಣೆಯನ್ನು ಒದಗಿಸುತ್ತದೆ.

ಎಲ್ಲ ಮಕರಗಳೂ ಮಾಂಸಾಹಾರಿಗಳೇ. ಜೀವನದುದ್ದಕ್ಕೂ ಅವುಗಳ ದಂತಪಂಕ್ತಿ ಕಳಚಿ ಬೀಳುತ್ತ ಹೊಸದಾಗಿ ಹುಟ್ಟುತ್ತಿರುತ್ತದೆ. ಇತರ ಸರೀಸೃಪಗಳಿಗೆ ಮೂರು ಕಕ್ಷೆಗಳ ಹೃದಯವಿದ್ದರೆ ಮಕರಗಳ ಹೃದಯದಲ್ಲಿ ನಾಲ್ಕು ಕಕ್ಷೆಗಳಿರುತ್ತವೆ. ಇದು ಮೊಸಳೆ ದೇಹದ ಅತ್ಯಂತ ವಿಶಿಷ್ಟ ಲಕ್ಷಣವೆನ್ನಬಹುದು.

ನೈಲ್ ನದಿಯಲ್ಲಿ ವಾಸಿಸುವ ಮೊಸಳೆಗಳನ್ನು ಪುರಾತನ ಕಾಲದ ಇಜಿಪ್ಟಿನ ಜನರು ಪೂಜಿಸುತ್ತಿದ್ದರು. ಮೊಸಳೆಗಳನ್ನು ಪಳಗಿಸಿ, ದೇವ ಮಂದಿರಗಳ, ವಿಶೇಷವಾಗಿ ಥೀಬೀಸ್ ದೇಗುಲದ ಪಕ್ಕದ ಕೆರೆಗಳಲ್ಲಿ ಸಾಕಿಡುತ್ತಿದ್ದರು. ಇಂಥ ಪವಿತ್ರ ಮೊಸಳೆಗಳು ಗತಿಸಿದ ಮೇಲೆ ಅವುಗಳ ದೇಹವನ್ನು ಮಮ್ಮಿಗಳನ್ನಾಗಿ ಮಾಡಿ ಪೂಜೆಗಿಡುತ್ತಿದ್ದರು. ಭಾರತದ ಕೆಲವು ಭಾಗಗಳಲ್ಲಿ ಇಂದಿಗೂ ಮೊಸಳೆಗಳನ್ನು ಪೂಜಿಸುವ ಸಂಪ್ರದಾಯವಿದೆ.

## ಘಡಿಯಾಲ್

*Gavialis gangeticus (Gmelin)*

ಉತ್ತರ ಭಾರತದ ನದಿಗಳಲ್ಲಿ ವಾಸಿಸುವ ಘಡಿಯಾಲ್ (ಅಥವಾ ಹಿಂದಿಯಲ್ಲಿ ಘರಿಯಾಲ್) ಗಳು ಇತರ ಮೊಸಳೆಗಳಿಗಿಂತ ಭಿನ್ನವಾಗಿ ಕಾಣಲು ಪ್ರಮುಖ ಕಾರಣವೇನೆಂದರೆ ಅವುಗಳ ಮೂತಿ ಮೀನು ಹಿಡಿಯುವ ಇಕ್ಕಳದಂತೆ ಕಿರಿದಾಗಿ ಉದ್ದಕ್ಕಿರುತ್ತದೆ. ಪ್ರೌಢ ಘಡಿಯಾಲ್‌ಗಳಿಗೆ ಈ ಮೂತಿಯ ತುದಿಯಲ್ಲಿ ಪುಟ್ಟ ಗಂಟು ಬೆಳೆಯುತ್ತದೆ. ದೂರದಿಂದ ನೋಡಿದರೆ ನೀರಿನ ಹೂಜಿಯ (ಘಡಾ) ಮೂತಿಯಂತೆ ಕಾಣುವುದರಿಂದಲೇ ಈ ಪ್ರಾಣಿಗೆ 'ಘಡಿಯಾಲ್' ಎಂಬ ಹೆಸರು ಬಂದಿದೆ.

ಗಂಗಾ, ಬ್ರಹ್ಮಪುತ್ರಾ, ಮಹಾನದಿ ಮತ್ತು ಸಿಂಧೂ ನದಿಗಳಲ್ಲಿ ವಾಸಿಸುವ ಇವು ಹೆಚ್ಚಾಗಿ ಮೀನುಗಳನ್ನೇ ತಿನ್ನುತ್ತವಾದರೂ ಪಕ್ಷಿಗಳನ್ನೂ, ಆಡುಕುರಿಗಳನ್ನೂ ಇತರ ಕಶೇರುಕಗಳನ್ನೂ ಭಕ್ಷಿಸುತ್ತವೆ. ಚಳಿಗಾಲದಲ್ಲಿ ಇವು ದೀರ್ಘಕಾಲದವರೆಗೆ ನದಿ ದಡದಲ್ಲಿ ಬಿಸಿಲು ಕಾಯಿಸುತ್ತವೆ.



ಚರ್ಮಕ್ಕಾಗಿ ಘಡಿಯಾಲ್‌ಗಳನ್ನು ಅತಿಯಾಗಿ ಬೇಟೆಯಾಡಿದ್ದರಿಂದ ಅವುಗಳ ಸಂಖ್ಯೆ ಭಾರೀ ಪ್ರಮಾಣದಲ್ಲಿ ಇಳಿಮುಖವಾಗಿತ್ತು. ಕಳೆದ ಒಂದೆರಡು ದಶಕಗಳಿಂದ ಅವುಗಳನ್ನು ಸಂರಕ್ಷಿಸುವ ಹಾಗೂ ಕೃತಕ ಪರಿಸರದಲ್ಲಿ ಮರಿ ಸಂಗೋಪನೆ ಮಾಡುವ ಕಾರ್ಯ ನಡೆಯುತ್ತಿದ್ದು ಈಗ ಅವುಗಳ ಸ್ಥಿತಿ ಸುಧಾರಿಸಿದೆ.

**ಅಳಿವೆಯ ಮೊಸಳೆ**

*(ಎಸ್ಟುರೈನ್ ಕ್ರೊಕೊಡೈಲ್) Crocodylus porosus* Schneider



ಮಕರ ಗುಂಪಿನಲ್ಲಿ ಅತ್ಯಂತ ದೊಡ್ಡ ಗಾತ್ರದ ಈ ಮೊಸಳೆಗಳು ಕಡಲ ತೀರದ ಅಳಿವೆಗಳಲ್ಲಿ ಹಾಗೂ ಜವುಗು ಪ್ರದೇಶಗಳಲ್ಲಿ ವಾಸಿಸುತ್ತವೆ. ಉಭಯವಾಸಿ ಜೀವನಕ್ಕೆ ಇದು ಚೆನ್ನಾಗಿ ಹೊಂದಿಕೊಂಡಿದೆ. ಸಾಮಾನ್ಯವಾಗಿ ಏಳೆಂಟು ಮೀಟರ್ ಉದ್ದ ಬೆಳೆಯುತ್ತವೆ. ಈವರೆಗೆ ದಾಖಲಾದ ಅತಿ ಉದ್ದದ ಮೊಸಳೆ 10 ಮೀಟರ್ ಇತ್ತು. ದಟ್ಟ ಮಾಸಲು ಹಸಿರು ಬಣ್ಣದ ಇದರ ಚರ್ಮದ ಮೇಲೆ ಬಿರುಸುಗೊರಸಿನ ತಟ್ಟೆಗಳಿವೆ. ಬಾಲದ ಮೇಲ್ಭಾಗದ ದಿಬ್ಬದುದ್ದಕ್ಕೂ ಗರಗಸದ ಹಲ್ಲಿನಂಥ ರಚನೆಗಳಿವೆ. ಬಾಯಿ ಮುಚ್ಚಿದ್ದಾಗಲೂ ಹೊರಚಾಚಿಕೊಂಡಿರುವ ಬಲಿಷ್ಠ ಚೂಪು ಹಲ್ಲುಗಳ

ಸಶಕ್ತ ದವಡೆ ಇದರದ್ದು. ಮೀನುಗಳನ್ನು, ಇತರ ಸರೀಸೃಪಗಳನ್ನು, ಜಲಪಕ್ಷಿಗಳನ್ನು ಮತ್ತು ಸಣ್ಣ ಪುಟ್ಟ ಸ್ತನಿ ಪ್ರಾಣಿಗಳನ್ನೂ ಇದು ಭಕ್ಷಿಸುತ್ತದೆ. ಭಾರತದ ಪೂರ್ವ ಕರಾವಳಿಯಲ್ಲಿ ಮತ್ತು ಅಂಡಮಾನ್ ನಿಕೊಬಾರ್ ದ್ವೀಪಗಳಲ್ಲಿ ಈ ಅಳಿವೆ ಮೊಸಳೆಗಳು ವಾಸಿಸುತ್ತವೆ.

## ಮಗ್ಗರ್

*Crocodylus palustris* (Lesson)

ಅಳಿವೆ ಮೊಸಳೆ ಹಾಗೂ ಘಡಿಯಾಲ್‌ಗಳಿಗಿಂತ ಈ ಜವುಳು ಮೊಸಳೆಗಳು ಗಾತ್ರದಲ್ಲಿ ಚಿಕ್ಕವು. ಸುಮಾರು 3ರಿಂದ 5ಮೀಟರ್ ಉದ್ದ ದೇಹದ ಈ ಪ್ರಾಣಿಗೆ ಅಗಲವಾದ ಚಿಕ್ಕ ಮೂತಿ ಇದೆ. ಪೂರ್ತಿ ಬೆಳೆದಾಗ ಇದರ ಮೈಬಣ್ಣವೂ ಮಾಸಲು ಹಸಿರುಬಣ್ಣ ತಾಳುತ್ತದೆ. ಮೈಮೇಲಿನ ಚಿಪ್ಪುಗಳು ಅಳಿವೆ ಮೊಸಳೆಯ ಚಿಪ್ಪುಗಳನ್ನೇ ಹೋಲುತ್ತವೆ.



ನದಿ, ಕೆರೆ, ಹೊಳೆ, ಸರೋವರಗಳಲ್ಲಿ ವಾಸಿಸುವ ಮಗ್ಗರ್‌ಗಳು ತುಂಬಾ ನಿಧಾನವಾಗಿ ಚಲಿಸುತ್ತವೆ. ಮೀನು, ಕಪ್ಪೆ, ಹಕ್ಕಿಪಕ್ಷಿ ಮತ್ತು ಚಿಕ್ಕ ಸ್ತನಿ ಪ್ರಾಣಿಗಳೇ ಇವುಗಳ ಆಹಾರ. ಜಮ್ಮು-ಕಾಶ್ಮೀರ, ಹಿಮಾಚಲ ಪ್ರದೇಶ, ಪಂಜಾಬ ಮತ್ತು ವಾಯುವ್ಯದ ಮರುಭೂಮಿ ಬಿಟ್ಟರೆ ಭಾರತದ ಇತರೆಲ್ಲ ಭೌಗೋಳಿಕ ಪರಿಸರದಲ್ಲೂ ಮಗ್ಗರ್‌ಗಳನ್ನು ಕಾಣಬಹುದು. ಆದರೆ ಅತಿವೃಷ್ಟಿ, ಮಹಾಪೂರ, ಬರಗಾಲ, ವಾಸಸ್ಥಾನದ ಧ್ವಂಸ, ಮೊಟ್ಟೆಗಳಿಗಾಗಿ ಬೇಟೆ ಇವೇ ಮುಂತಾದ ಕಾರಣಗಳಿಂದಾಗಿ ಇವುಗಳ ಸಂಖ್ಯೆ ಕ್ಷೀಣಿಸಿದೆ. ಈಚೆಗೆ ಮಗ್ಗರ್ ಮೊಸಳೆಗಳ ಸಂತಾನವೃದ್ಧಿ ಹಾಗೂ ಸಂರಕ್ಷಣಾ ಕ್ರಮಗಳನ್ನು ಕೈಗೊಂಡಿದ್ದರಿಂದ ಅವುಗಳ ಅವನತಿಯನ್ನು ತಡೆದಂತಾಗಿದೆ.

## ಹಲ್ಲಿಗಳು

ಸರೀಸೃಪಗಳಲ್ಲಿ ಅತ್ಯಂತ ಪರಿಚಿತವಿರುವ ಪ್ರಾಣಿಗಳೆಂದರೆ ಹಲ್ಲಿ ಮತ್ತು ಅದರ ಸಮೀಪ ಸಂಬಂಧಿ ಹಾವು. ಇವೆರಡರ ಮಧ್ಯೆ ಪರಸ್ಪರ ಗಾಢ ಹೋಲಿಕೆ ಇರುವುದರಿಂದಲೇ ಒಂದೇ ಸ್ತರದಲ್ಲಿ ಇವೆರಡೂ ಪ್ರಾಣಿಗಳನ್ನು ಗುರುತಿಸಲಾಗಿದೆ.

ಈ ಸ್ತರದ ಹೆಸರು 'ಸ್ಕ್ವಾಮಾಟಾ', ಅಂದರೆ 'ಪೊರೆಯುಳ್ಳ ಜೀವಿಗಳು'. ಹಾಗೆ ನೋಡಿದರೆ, ಎಲ್ಲಾ ಸರೀಸೃಪಗಳಿಗೂ ಒಂದಲ್ಲ ಒಂದು ಬಗೆಯ ಪೊರೆಗಳು ಅಂದರೆ ಚಿಪ್ಪು, ತಟ್ಟೆ, ಗುರಾಣಿಯಂಥ ಹೊರ ಕವಚ ಇದ್ದೇ ಇರುತ್ತದೆ.

ಇತರೆಲ್ಲ ಸರೀಸೃಪಗಳ ಹಾಗೆ ಹಲ್ಲಿಗಳೂ ತಮ್ಮ ದೇಹದ ತಾಪಾಂಶದ ರಕ್ಷಣೆಗೆ ಹೊರಗಿನ ಪರಿಸರವನ್ನೇ ಅವಲಂಬಿಸಿರುತ್ತವೆ. ಆದ್ದರಿಂದಲೇ ಇವುಗಳನ್ನು 'ಹೊರ ತಾಪದ' (ಎಕ್ಟೊಥರ್ಮಿಕ್) ಜೀವಿಗಳೆಂದೂ ಕರೆಯುತ್ತಾರೆ.

ವೈರಿಗಳಿಂದ ಬಚಾವಾಗುವ ಉದ್ದೇಶದಿಂದ ಹಲ್ಲಿಗಳಲ್ಲಿ ಹಲವು ವಿಧದ ಶಾರೀರಿಕ ವಿನ್ಯಾಸಗಳೂ, ವಿಶಿಷ್ಟ ನಡವಳಿಕೆಗಳೂ ರೂಪುಗೊಂಡಿವೆ. ಅವುಗಳಲ್ಲಿ ಸಾರ್ವತ್ರಿಕವಾಗಿ ಕಾಣಬರುವ ಅತ್ಯಂತ ಸರಳ ರಕ್ಷಾತ್ಮಕ ಉಪಾಯವೆಂದರೆ ಸರ್‍ರೆಂದು ಓಡುವುದು. ಅಡಗುವ ತಾಣಗಳಿಗೆ ಇವು ಓಡುತ್ತವೆ ಇಲ್ಲವೆ, ಹಾರುವ ಹಲ್ಲಿಯ ಉದಾಹರಣೆ ತೆಗೆದುಕೊಂಡರೆ, ಗಾಳಿಯಲ್ಲಿ ಜಾರುತ್ತವೆ. ಅಗತ್ಯ ಬಿದ್ದಾಗ ಹಿಂಗಾಲುಗಳಲ್ಲೇ ಓಡುತ್ತವೆ; ನೀರಿನ ಮೇಲೂ ಧಾವಿಸುತ್ತವೆ; ಕೊಳದ ತಳದಲ್ಲಿ ಇಲ್ಲವೆ, ಮಣ್ಣಿನ ಬಿಲದಲ್ಲಿ ಅವಿತುಕೊಳ್ಳುತ್ತವೆ.

ಭಾರತದಲ್ಲಿ ಹಲ್ಲಿಗಳಿಲ್ಲದ ತಾಣವಿಲ್ಲ. ಅರಣ್ಯಗಳಲ್ಲಿ, ಮರುಭೂಮಿಯಲ್ಲಿ, 5,000 ಮೀಟರ್ ಎತ್ತರದವರೆಗಿನ ಹಿಮಾಲಯ ಪರ್ವತಗಳಲ್ಲಿ ಇವುಗಳನ್ನು ಕಾಣಬಹುದು. ನಮ್ಮ ದೇಶದ ಯಾವ ಹಲ್ಲಿಯೂ ವಿಷಯುಕ್ತವಲ್ಲ. ಕೆಲವು ಹಲ್ಲಿಗಳು ಕ್ರಿಮಿ ಕೀಟಗಳನ್ನು ಭಕ್ಷಿಸುತ್ತವಾದರೆ ಇನ್ನು ಕೆಲವು ಉಡಗಳು ಚಿಕ್ಕ ಪುಟ್ಟ ಪ್ರಾಣಿಗಳನ್ನು ಹಿಡಿದು ತಿನ್ನುತ್ತವೆ. ಸಸ್ಯಾಹಾರಿ ಹಲ್ಲಿಗಳೂ ಇವೆ.

**ಉಡ**

*(ಕಾಮನ್ ಇಂಡಿಯನ್ ಮಾನಿಟರ್) Varanus bengalensis* (Daudin)



ಇವುಗಳಿಗೆ ಮಾನಿಟರ್ ಉಡ ಎಂತಲೂ ಹೇಳುತ್ತಾರೆ. ಭಾರತದ ಎಲ್ಲಾ ಬಗೆಯ ಭೌಗೋಳಿಕ ಆವಾಸಗಳಲ್ಲೂ ಇದನ್ನು ಕಾಣಬಹುದು. ಇದರ ದೇಹ 70ರಿಂದ 71 ಸೆಂಟಿಮೀಟರ್ ಉದ್ದವಿದ್ದು ಪೂರ್ಣ ಬೆಳೆದ ದೊಡ್ಡ ಉಡಗಳ ಬಾಲ 100 ಸೆಂಟಿಮೀಟರಿನಷ್ಟು ಬೆಳೆಯಬಹುದು. ದೇಹದ ಮೇಲೆ ಮಸುಕುಮಸುಕಾದ ಕಪ್ಪು ಛಾಯೆಯ ಅಡ್ಡ ಗೀರುಗಳಿರುತ್ತವೆ. ತಲೆಯ ಮೇಲೆ ಈ ಗೀರುಗಳು ದೊಡ್ಡದಾಗಿ ಕಾಣುತ್ತವೆ. ಹಲ್ಲು ಉದ್ದಕ್ಕೆ ಚೂಪಾಗಿರುತ್ತವೆ. ನಾಲಿಗೆಯೂ ಅತೀವ ಉದ್ದಕ್ಕಿದ್ದು ತುದಿಯಲ್ಲಿ ಸೀಳಿರುತ್ತದೆ.

ಮಾನಿಟರ್ ಉಡದ ಮುಖ್ಯ ಆಹಾರವೆಂದರೆ ಸಣ್ಣ ಪುಟ್ಟ ಭೂವಾಸಿ ಕಶೇರುಕಗಳು, ನೆಲವಾಸಿ ಪಕ್ಷಿ ಹಾಗೂ ಅವುಗಳ ಮೊಟ್ಟೆಗಳು, ಏಡಿ, ಚೇಳು ಮತ್ತು ಮೀನುಗಳು. ಈ ಉಡದ ಚರ್ಮಕ್ಕಾಗಿ ವ್ಯಾಪಕ ಬೇಟೆಕಾರ್ಯ ನಡೆಸುವವರಿಂದಾಗಿ ಇವುಗಳ ಸಂತತಿ ಅವನತಿಯ ಅಂಚಿಗೆ ಬಂದಿದೆ.

## ನೀರ ತಡಿಯ ಉಡಗಳು

*(ವಾಟರ್ ಮಾನಿಟರ್) Varanus salvator* (Laurenti)

ಇವೂ ಭಾರತದುದ್ದಗಲಕ್ಕೆ ಕಾಣಸಿಗುತ್ತವೆ. ಇಂಡೋನೇಷ್ಯದ 'ಕೊಮೊಡೊ ಡ್ರಾಗನ್' ಎಂಬ ಉಡಗಳನ್ನು ಬಿಟ್ಟರೆ ಈ ನಮ್ಮ ನೀರಿನ ಉಡಗಳೇ ಪ್ರಪಂಚದ ಉಡಗಳಲ್ಲೆಲ್ಲ ಅತಿ ದೊಡ್ಡ ಗಾತ್ರದವೆನ್ನಬಹುದು. ಇವು ಮೂರು ಮೀಟರ್ ಉದ್ದ ಬೆಳೆಯುತ್ತವೆ. ಚೂಪು ಮೂತಿ ಮತ್ತು ಕಿರಿದಾದ ನೀಳ ಕತ್ತು ಇವುಗಳ ಪ್ರಮುಖ ಲಕ್ಷಣ. ಮೈ ಬಣ್ಣ ಮಬ್ಬು ಹಸಿರಿನದಾಗಿದ್ದು ಅವುಗಳ ಮೇಲೆ ಅಸಂಖ್ಯ ಸೂಕ್ಷ್ಮ ಗೀರುಗಳೂ ಪುಟ್ಟ ಪುಟ್ಟ ಹಳದಿ ಚುಕ್ಕಿಗಳೂ ಇರುತ್ತವೆ. ಇದು ಏನನ್ನಾದರೂ ತಿನ್ನುತ್ತಾದಾದರೂ ಮೀನು ಮತ್ತು ಪಕ್ಷಿ ಮೊಟ್ಟೆ ಇದಕ್ಕೆ ಬಹಳ ಇಷ್ಟ. ನದಿ ಅಥವಾ ಕೆರೆಯ ದಂಡೆ, ಜವುಗು ಪ್ರದೇಶ ಮತ್ತು ಅಳಿವೆಯಂಥ ತುಂಬ ಆರ್ದ್ರ ಪರಿಸರದಲ್ಲಿ ಇವು ತಮ್ಮ ಆವಾಸ ನಿರ್ಮಿಸಿಕೊಳ್ಳುತ್ತವೆ.

ಇವುಗಳ ಚರ್ಮಕ್ಕೂ ಭಾರೀ ಬೇಡಿಕೆ ಇದೆ. ಅವುಗಳ ನಿರಂತರ ಕಳ್ಳ ಸಾಗಣೆಯಿಂದಾಗಿ ನದಿ ಉಡಗಳ ಸಂಖ್ಯೆ ತೀರಾ ಅಪರೂಪವಾಗಿದ್ದು, ಭಾರತೀಯ ವನ್ಯ ಜೀವಿ (ಸಂರಕ್ಷಣಾ ) ಕಾಯ್ದೆಯ ಒಂದನೆ ಪರಿಚ್ಛೇದದಲ್ಲೇ ಈ ಉಡಗಳನ್ನು ಹೆಸರಿಸಲಾಗಿದೆ.

## ಹಳದಿ ಉಡ

*Varanus flavescens* (Gray)

ಪಂಜಾಬದಿಂದ ಹಿಡಿದು ಪಶ್ಚಿಮ ಬಂಗಾಳದವರೆಗಿನ ಉತ್ತರ ಭಾರತದುದ್ದಕ್ಕೂ ಇವುಗಳ ವಾಸಸ್ಥಾನವಿದೆ. ದಟ್ಟ ಕಂದು ಬಣ್ಣದ ಈ ಉಡದ ಚರ್ಮಕ್ಕೆ ಕೊಂಚ ನಸುಗೆಂಪು ಛಾಯೆಯೂ ಇದೆ. ಚಪ್ಪಟೆಯಾದ ಉದ್ದ ಬಾಲ ಇದರ ವಿಶಿಷ್ಟ ಅಂಗವಾಗಿದ್ದು, ಸಲೀಸಾಗಿ ನೀರಲ್ಲಿ ಈಜಲು ಸಹಕಾರಿಯಾಗಿದೆ. ಸಿಹಿ ನೀರಿನ

ಏಡಿಗಳನ್ನೂ ಮೀನುಗಳನ್ನೂ ಹಿಡಿದು ತಿನ್ನುತ್ತದೆ. ಇದೂ ಸಹ ಚರ್ಮದ ಬೇಟೆಗಾರರಿಂದಾಗಿ ಇಂದು ಕ್ರಮೇಣ ಕಣ್ಮರೆಯಾಗುತ್ತಿದೆ.

### ಮರುಭೂಮಿಯ ಉಡ

*(ಇಂಡಿಯನ್ ಡೆಸರ್ಟ್ ಮಾನಿಟರ್) Varanus Griseus* (Daudin)

ರಾಜಸ್ಥಾನ, ಮಧ್ಯಪ್ರದೇಶ, ಮಹಾರಾಷ್ಟ್ರ, ಪಂಜಾಬ್ ರಾಜ್ಯಗಳ ಶುಷ್ಕ ಪರಿಸರದಲ್ಲಿ ಜೀವಿಸುವ ಈ ಉಡದ ಮೈಬಣ್ಣ ಮರಳಿನಂತಿದ್ದು, ಕೆಲವು ಕಡೆ ಹಳದಿ ಅಥವಾ ಹಸಿರು ಛಾಯೆಯ ಹಳದಿ ಬಣ್ಣದವೂ ಇರುತ್ತವೆ. ಮೈಮೇಲೆ ದಟ್ಟ ಕಂದು ಇಲ್ಲವೆ ಹಸಿರು ಛಾಯೆಯ ಚುಕ್ಕಿಗಳಿರುತ್ತವೆ. ಬಾರುಕೋಲಿನಂಥ ಬಾಲದ ಮೇಲೆ ದಟ್ಟ ಕಂದಿನ ಚಾಪೆ ಹೆಣೆದಂತೆ ಕಾಣುವ ಗೀರುಗಳಿರುತ್ತವೆ.

ಮರುಭೂಮಿಯ ಮರಳು ರಾಶಿಯಲ್ಲಿ ಬಿಲ ತೋಡಿ ವಾಸಿಸುವ ಈ ಉಡ ಸಾಮಾನ್ಯವಾಗಿ ಮಿಡತೆ, ಹುಲ್ಲುಕುದುರೆ, ಜೀರುಂಡೆಗಳಂಥ ಕೀಟಗಳನ್ನೂ, ಚಿಕ್ಕಪುಟ್ಟ ಕಶೇರುಕಗಳನ್ನೂ ತಿನ್ನುತ್ತದೆ. ಇದರ ಚರ್ಮಕ್ಕೂ ಬೇಡಿಕೆಯಿದ್ದು, ಸಂತತಿ ನಾಶವಾಗುತ್ತಿದೆ.

## ಹಾವುಗಳು

ಹಾವುಗಳಷ್ಟು ಭಯಭೀತಿ ಹುಟ್ಟಿಸುವ ಸರೀಸೃಪ ಬೇರೊಂದಿಲ್ಲ. ಲೋಳೆಯುಕ್ತ ಈ ಕುರೂಪಿ ಜೀವಿಗಳು ಅಪಾಯಕಾರಿಯೆಂದೇ ಅನೇಕರು ಭಾವಿಸುತ್ತಾರೆ. ಆದರೆ ಅವು ಲೋಳೆಯುಕ್ತವೂ ಅಲ್ಲ, ಕುರೂಪಿಯೂ ಅಲ್ಲ. ಅನೇಕ ಹಾವುಗಳು ನೋಡಲು ಸುಂದರ. ಬಣ್ಣ ಬಣ್ಣದ ಪಟ್ಟೆ, ಚಿತ್ತಾರದ ವಿನ್ಯಾಸ, ತೆಳು ದಾರದಂಥ ಶೋಭಾಯಮಾನ ಕಾಯ. ಕೆಲವರಿಗೆ ಭಯ, ಕೆಲವರಿಗೆ ಕುತೂಹಲ, ಕೆಲವರಿಗೆ ಎರಡೂ ಸಂಮಿಶ್ರ. ಅಂತೂ ಹಾವು ಒಬ್ಬೊಬ್ಬರಲ್ಲಿ ಒಂದೊಂದು ಬಗೆಯ ಪ್ರತಿಕ್ರಿಯೆ ಉಂಟುಮಾಡುತ್ತದೆ.

ಹಾವುಗಳಲ್ಲಿ ಒಟ್ಟು ಸುಮಾರು 3,000 ವಂಶಗಳಿವೆ. ಇವುಗಳಲ್ಲಿ ಮೂರರಲ್ಲೊಂದು ಪಾಲು ಹಾವುಗಳಲ್ಲಿ ಮಾತ್ರ ವಿಷದ ಗ್ರಂಥಿಗಳಿವೆ. ಅದರಲ್ಲೂ ಮನುಷ್ಯನಿಗೆ ಅಪಾಯ ತರುವಷ್ಟು ಪ್ರಮಾಣದ ವಿಷ ಕಕ್ಕುವ ಹಾವುಗಳ ಸಂಖ್ಯೆ ತೀರಾ ಕಡಿಮೆ. ಅಂಥ ಹಾವುಗಳೂ ಬಹುತೇಕ ಸಂದರ್ಭಗಳಲ್ಲಿ ಮನುಷ್ಯರಿಂದ ದೂರವಿರಲು ಯತ್ನಿಸುತ್ತವೆ. ತೀರ ಅನಿವಾರ್ಯ ಸಂದರ್ಭಗಳಲ್ಲಿ, ತಾವೇ ಅಪಾಯಕ್ಕೆ ಸಿಲುಕಿದಾಗ ಮಾತ್ರ ಅವು ದಾಳಿ ಇಡುತ್ತವೆ, ಅಥವಾ ಕಚ್ಚುತ್ತವೆ. ಅಂದ ಮೇಲೆ, ಬಹುಪಾಲು ಹಾವುಗಳು ಮನುಷ್ಯನ ಪಾಲಿಗೆ ನಿರಪಾಯಕಾರಿ ಎಂದೇ ಹೇಳಬಹುದು. ಅವು ಕ್ರಿಮಿಕೀಟ, ಇಲಿ, ಹೆಗ್ಗಣ, ಮೊಲ, ಪಕ್ಷಿ, ಹಲ್ಲಿಗಳನ್ನೂ ಕೆಲವು ಸಂದರ್ಭಗಳಲ್ಲಿ ದೊಡ್ಡ ಸ್ತನಿಗಳನ್ನೂ ಹಿಡಿದು ತಿನ್ನುತ್ತವೆ. ಪೈರುಗಳನ್ನು ನಾಶ ಮಾಡುವ ದಂಶಕಗಳನ್ನು ಹಾವುಗಳು ಭಕ್ಷಿಸುವುದರಿಂದ, ಅವು ಮನುಷ್ಯನಿಗೆ ಉಪಕಾರಿಯೆಂದೇ ಹೇಳಬಹುದು.

ಹಾವುಗಳು ಸದಾ ಚಲನಶೀಲ ಬೇಟೆಗಾರ ಪ್ರಾಣಿಯಾಗಿದ್ದರಿಂದ ಅವುಗಳ ಇಂದ್ರಿಯಗಳು ತುಂಬಾ ಚುರುಕಾಗಿರಬೇಕಾಗುತ್ತದೆ. ಅವಕ್ಕೆ ಕಾಲುಗಳಿಲ್ಲದ್ದರಿಂದ ಹೊಟ್ಟೆ ಹೊಸೆಯುತ್ತಲೇ ಚಲಿಸಬೇಕಾಗುತ್ತದೆ. ಬಿಲವಾಸಿ ಕೆಲವು ಪ್ರಭೇದಗಳನ್ನು ಬಿಟ್ಟರೆ ಇತರೆಲ್ಲ ಹಾವುಗಳ ದೃಷ್ಟಿ ತೀರಾ ಚುರುಕಾಗಿರುತ್ತದೆ. ರೆಪ್ಪೆಗಳಿಲ್ಲದ ಅವುಗಳ ಕಣ್ಣಿನ ಮೇಲೆ ಮಸಕಾದ ಒಂದು ಪಾರದರ್ಶಕ ಪೊರೆ ಇರುತ್ತದೆ. ಹಗಲು ಬೇಟೆಯಾಡುವ ಹಾವುಗಳ ಕಣ್ಣಿನಲ್ಲಿ ವೃತ್ತಾಕಾರದ ಪಾಪೆ ಇದ್ದರೆ, ರಾತ್ರಿ ಸಂಚರಿಸುವ ಹಾವುಗಳಿಗೆ ಬೆಕ್ಕಿನ ಕಣ್ಣಿನ ಪಾಪೆಯಂಥ ಲಂಬ ಅಂಡಾಕೃತಿಯ ಕನೀನಿಕೆ ಇರುತ್ತದೆ. ಹಾವಿನ ವಾಸನಾಶಕ್ತಿ ಕೂಡಾ ತುಂಬಾ ಚುರುಕು. ಈ ವಾಸನಾಗ್ರಹಣ ಶಕ್ತಿಯಿಂದಾಗಿಯೇ ಅದು ತನ್ನ ಜಾತಿಯ ಇತರ ಹಾವುಗಳನ್ನೂ ತನ್ನ ಬೇಟೆಯನ್ನೂ ಗುರುತಿಸುತ್ತದೆ. ಅದರ ಸೀಳುನಾಲಗೆ ಸ್ಪರ್ಶ ಮತ್ತು ವಾಸನೆ ಗ್ರಹಣದ ಅತಿ ನಾಜೂಕಿನ ಉಪಕರಣದಂತೆ ಕೆಲಸ ಮಾಡುತ್ತದೆ. ಅವುಗಳಿಗೆ ಹೊರಕಿವಿ ಅಥವಾ ಕಿವಿತಮಟೆ ಯಾವುದೂ ಇಲ್ಲ. ಆದರೂ ನೆಲದ ಕಂಪನದ ಆಧಾರದಿಂದಲೇ ಅವು ಸಪ್ಪಳವನ್ನು ಗುರುತಿಸುತ್ತವೆ. ಹಾವಾಡಿಗನ ಪುಂಗಿಯ ಕುಣಿತವನ್ನು ನೋಡಿ ನಾಗರ ಹಾವುಗಳು ತಲೆದೂಗುತ್ತವೆಯೇ ಹೊರತು ಪುಂಗಿಯಿಂದ ಹೊಮ್ಮುವ ಸ್ವರ ಅವಕ್ಕೆ ಏನೇನೂ ಕೇಳಿಸುವುದಿಲ್ಲ. ಹಾವುಗಳ ದವಡೆಗೆ ಭಾರೀ ಸ್ಥಿತಿಸ್ಥಾಪಕ ಶಕ್ತಿಯಿದ್ದು, ಅವು ಊಹೆಗೂ ಮೀರಿದ ಪ್ರಮಾಣದಲ್ಲಿ ತಮ್ಮ ಬಾಯನ್ನು ಅಗಲಿಸುತ್ತವೆ. ಬಾಯಲ್ಲಿ ಕಚ್ಚಿ ಹಿಡಿದ ಬೇಟೆ ಸುಲಭವಾಗಿ ತಪ್ಪಿಸಿಕೊಳ್ಳದ ಹಾಗೆ, ಹಲ್ಲುಗಳು ಹಿಮ್ಮೊಗ ಬಾಗಿರುತ್ತವೆ. ಬೇಟೆ ಚಿಕ್ಕದಿರಲಿ, ಅಥವಾ ಹಂದಿ ಮತ್ತು ಜಿಂಕೆಯಂಥ ದೊಡ್ಡ ಪ್ರಾಣಿಯಿರಲಿ, ಹಾವುಗಳು ಅವನ್ನು ಇಡಿಯಾಗಿಯೇ ನುಂಗುತ್ತವೆ.

ಜಗತ್ತಿನಲ್ಲಿ ಸುಮಾರು 2,500 ಬಗೆಯ ಹಾವುಗಳಿದ್ದರೆ ಭಾರತದಲ್ಲಿ ಸುಮಾರು 200 ಜಾತಿಯ ಹಾವುಗಳಿವೆ. ಇವುಗಳಲ್ಲಿ ಕೇವಲ ನಾಲ್ಕೇ ನಾಲ್ಕು ಹಾವುಗಳು ವಿಷಪೂರಿತವಾಗಿವೆ. ಅವೆಂದರೆ: ನಾಗರ ಕಡಂಬಳ (ಕ್ರೇಯ್ಟ್); ಉರಿಮಂಡಲ (ರಸ್ಸೆಲ್ಸ್ ವೈಪರ್) ಮತ್ತು ಕೊಳಕು ಮಂಡಲ (ಗರಗಸ ಪಟ್ಟೆಯ ವೈಪರ್). 'ವೈಪರ್' ಅಂದರೆ ಮಂಡಲ ಹಾವು. ಮಂಡಲಗಳಲ್ಲೂ ಅನೇಕ ವಿಧಗಳಿವೆ. ಇವುಗಳನ್ನು ಗುರುತಿಸುವುದನ್ನು ಕಲಿಯುವುದು ತುಂಬ ಮುಖ್ಯ. ಭಾರತದ ಎಲ್ಲಾ ಹಾವುಗಳಲ್ಲಿ ಕಡಂಬಳ (ಕ್ರೇಯ್ಟ್) ಹಾವು ಅತ್ಯಂತ ಘೋರ ವಿಷವುಳ್ಳದ್ದೆಂದು ಹೇಳುತ್ತಾರೆ. ಜಗತ್ತಿನ ಎಲ್ಲ ಹಾವುಗಳಲ್ಲಿ ಆಸ್ಟ್ರೇಲಿಯಾದ ಹುಲಿ ಹಾವು (ಟೈಗರ್ ಸ್ನೇಕ್) ಅತ್ಯಂತ ವಿಷಕಾರಿ. ಹಾವುಗಳಲ್ಲಿ ಹೆಣ್ಣು ಮತ್ತು ಗಂಡು ಒಂದೇ ವಂಶದವಾಗಿದ್ದರೆ ಮಾತ್ರ ಅವು ಮೈಥುನ ನಡೆಸುತ್ತವೆ. ಕೆಲವು ಹಾವುಗಳು ನೇರವಾಗಿ ಮರಿಗಳನ್ನೇ ಹೆರುತ್ತವೆ; ಇನ್ನು ಕೆಲವು (ಉದಾ: ನಾಗರ ಮತ್ತು ಕ್ರೇಯ್ಟ್) ಮೊಟ್ಟೆ ಇಡುತ್ತವೆ. ಮರಿಗೆ ಜನ್ಮ ನೀಡುವ ಹಾವುಗಳೆಂದರೆ ವೈಪರ್, ಬೋವಾ (ಹೆಬ್ಬಾವು) ಮತ್ತು ಕೆಲವು ಬಿಳಿ ಹಾವುಗಳು. ಸಾಮಾನ್ಯವಾಗಿ ಹಾವುಗಳ ಜೀವಿತಾವಧಿ 20 ವರ್ಷಗಳಾದರೂ ಕೆಲವು ಮಾತ್ರ 30 ವರ್ಷಗಳ ಕಾಲ ಜೀವಿಸಿರುತ್ತವೆ.

ಹಾವುಗಳು ಸೇಡು ತೀರಿಸಿಕೊಳ್ಳುತ್ತವೆಂದೂ, ಒಂದನ್ನು ಕೊಂದರೆ ಅದರ ಸಂಗಾತಿ ಬಂದು ನಿಮ್ಮನ್ನು ಕಚ್ಚುತ್ತದೆಂದೂ ಮೂಢನಂಬಿಕೆ ಭಾರತದಲ್ಲಿ ವ್ಯಾಪಕವಾಗಿ ಪ್ರಚಲಿತದಲ್ಲಿದೆ. ಇದು ನಿಜವಲ್ಲ. ಸೇಡು ಅನ್ನೋದು ಪ್ರಾಯಶಃ ಮನುಷ್ಯ ಜೀವಿಗಳಲ್ಲಿ ಮಾತ್ರ ಕಂಡುಬರುತ್ತದೆ. ಹಾವುಗಳ ಹೆಡೆಯಲ್ಲಿ ಮಣಿ ಇರುತ್ತದೆಂದೂ ಕೆಲವರು ನಂಬುತ್ತಾರೆ. ಇದೂ-ನಿಜವಲ್ಲ. ಹಾವು ಹಿಡಿಯುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿರುವ ಮದ್ರಾಸಿನ ಇರುಳರನ್ನು ಕೇಳಿ - ಮಣಿ ಮುತ್ತುಗಳು ಸಿಗುವಂತಿದ್ದರೆ ತಾವು ರಾಜಮಹಾರಾಜರಾಗಿ ಬದುಕುತ್ತಿದ್ದೆವೆಂದೂ ಹಾವು ಹಿಡಿಯುವ ದಂಧೆಯಲ್ಲಿ ಮುಂದುವರೆಯಬೇಕಾದ ಅಗತ್ಯವೇ ಇರುತ್ತಿರಲಿಲ್ಲವೆಂದೂ ಅವರು ಹೇಳುತ್ತಾರೆ.

ಹಾವನ್ನು ಕಂಡಲ್ಲಿ ಕೊಲ್ಲುವ ಮನೋವೃತ್ತಿ ನಮ್ಮದಾಗಿದೆ. ಹಾವಿನ ಚರ್ಮಕ್ಕೂ ಕಳ್ಳ ಮಾರುಕಟ್ಟೆಯಲ್ಲಿ ಬೇಡಿಕೆ ಇದೆ. ಈ ಎರಡು ಮುಖ್ಯ ಕಾರಣಗಳ ಜತೆ ಹಾವಿನ ಆವಾಸಗಳ ನಾಶವೂ ಕ್ಷಿಪ್ರವಾಗಿ ನಡೆಯುತ್ತಿರುವುದರಿಂದ ಭಾರತದ ಬಹಳಷ್ಟು ಉರಗ ವಂಶಗಳು ನಿರ್ವಂಶವಾಗುತ್ತಿವೆ. ಅಳಿವಿನ ಅಂಚಿಗೆ ಬಂದಿರುವ ಅಂಥ ಕೆಲವು ಹಾವುಗಳನ್ನು ಇಲ್ಲಿ ಪರಿಚಯಿಸಲಾಗಿದೆ.

## ಭಾರತದ ಕಲ್ಲು ಹೆಬ್ಬಾವು

*(ರಾಕ್ ಪೈಥಾನ್) Python molurus* (Linnaeus)

ಭಾರತದ ಎಲ್ಲೆಡೆ – ಕುರುಚಲು ಅರಣ್ಯಗಳಲ್ಲಿ, ದಟ್ಟ ಕಾಡಿನಲ್ಲಿ, ಕಾಂಡ್ಲ ಅರಣ್ಯದ ಜವುಗು ಪ್ರದೇಶದಲ್ಲಿ ಈ ಹೆಬ್ಬಾವು ಬದುಕಬಲ್ಲದು. (ವರ್ಣಚಿತ್ರ – 19) ದಪ್ಪನ್ನ, ದೊಡ್ಡ ಗಾತ್ರದ ಈ ಹಾವು ಸುಮಾರು ಏಳು ಮೀಟರ್ ಉದ್ದವಿರುತ್ತದೆ. ದಟ್ಟ ಕಂದು ಬಣ್ಣದ ಇದರ ಬೆನ್ನ ಮೇಲೆ ಸ್ಫಟಿಕದ ಆಕೃತಿಯ ಚಿತ್ತಾರಗಳಿರುತ್ತವೆ; ಹೊಟ್ಟೆಯ ಎರಡೂ ಪಕ್ಕಗಳಿಗೆ ಕಪ್ಪು ಅಂಚಿರುತ್ತದೆ. ಇತರ ಹಾವುಗಳಲ್ಲಿ ಕಾಣದ ಭರ್ಜಿಯ ಅಲಗಿನಂಥ ಚಿತ್ರ ಇದರ ತಲೆಯ ಮೇಲಿರುತ್ತದೆ. ಇದು ಮರ ಏರುವುದರಲ್ಲೂ ನೀರಲ್ಲಿ ಈಜುವುದರಲ್ಲೂ ನಿಷ್ಣಾತ. ಪೈಥೊನಿಡೆ ಕುಲಕ್ಕೆ ಸೇರಿದ ಹೆಬ್ಬಾವುಗಳು ಆಫ್ರಿಕದ ಬೋವಾಗಳಂತೆ ಕಾಣುತ್ತವಾದರೂ ಇವುಗಳ ತಲೆಯಲ್ಲಿ ಒಂದು ಹೆಚ್ಚುವರಿ ಮೂಳೆ ಇರುತ್ತದೆ. ಹೆಬ್ಬಾವಿನ ಕುಲದ ಬಹಳಷ್ಟು ಹಾವುಗಳು ನಿಶಾಚರಿಗಳಾಗಿದ್ದು, ಸಾಮಾನ್ಯವಾಗಿ ಅವು ನೀರಿನ ತಡಿಯಲ್ಲೇ ವಾಸಿಸುತ್ತವೆ.

ಕಲ್ಲು ಹೆಬ್ಬಾವುಗಳು ಸ್ತನಿ ಪ್ರಾಣಿಗಳನ್ನು, ಪಕ್ಷಿಗಳನ್ನು, ಸರೀಸೃಪಗಳನ್ನೂ ಕಪ್ಪೆಗಳನ್ನೂ ಹಿಡಿದು ನುಂಗುತ್ತವೆ. ಆದರೆ ಇವುಗಳ ಹಲ್ಲಿನಲ್ಲಿ ವಿಷ ಇಲ್ಲ. ಈ ಹೆಬ್ಬಾವುಗಳ ಚರ್ಮಕ್ಕಾಗಿ ಬೇಟೆ ನಡೆಯುತ್ತಿದ್ದು ಇವು ನಿರ್ವಂಶವಾಗುವ ಭೀತಿಯಿದೆ. ಭಾರತೀಯ ವನ್ಯಜೀವಿ (ಸಂರಕ್ಷಣಾ) ಕಾಯಿದೆಯ ಪ್ರಕಾರ ಇವುಗಳ ಬೇಟೆಯನ್ನು ನಿಷೇಧಿಸಲಾಗಿದೆ.

## ಪಟ್ಟೆ ಹೆಬ್ಬಾವು

*(ರೆಟಿಕ್ಯುಲೇಟೆಡ್ ಪೈಥಾನ್) Python reticulalus* (Schneider)

ಪಟ್ಟೆ ಹೆಬ್ಬಾವು ಅಥವಾ ರಾಜ ಹೆಬ್ಬಾವು ಭಾರತದ ಹಾವುಗಳಲ್ಲೇ ಅತ್ಯಂತ ದೊಡ್ಡ ಗಾತ್ರದ್ದಾಗಿದ್ದು, ಕೆಲವೊಮ್ಮೆ 10 ಮೀಟರ್ ಉದ್ದಕ್ಕೂ ಬೆಳೆಯಬಹುದಾಗಿದೆ. ಮೇಲ್ನೋಟಕ್ಕೆ ಇದು ಕಲ್ಲು ಹೆಬ್ಬಾವಿನ ಹಾಗೆಯೇ ಕಾಣುತ್ತಾದರೂ ಇದರ ಹಳದಿ ಕಂದು ಕಪ್ಪಿನ ಬೆನ್ನ ಮೇಲೆ ದೊಡ್ಡ ದೊಡ್ಡ ತಟ್ಟೆಯಂಥ ಕಪ್ಪು, ಕಂದು ಚಿತ್ರಗಳಿರುತ್ತವೆ. ಈ ತಟ್ಟೆ ಪಟ್ಟೆಗಳು ವರ್ತುಳಾಕಾರವೂ ಇರಬಹುದು, ಇಲ್ಲದೆ ಅಸ್ಪಷ್ಟ ಅಷ್ಟಕೋನದಂತೆಯೂ ಇರಬಹುದು. ಇದೂ ವಿಷಕಾರಿಯಲ್ಲ. ಆಹಾರಕ್ಕೆ ಇದು ಬಾತುಕೋಳಿ, ಬೆಕ್ಕು, ನಾಯಿ, ಕೋಳಿ, ಹಂದಿಗಳನ್ನು ಹಿಡಿಯುತ್ತದೆ.

ಪ್ರಮುಖವಾಗಿ ಈ ಹೆಬ್ಬಾವು ಈಶಾನ್ಯ ಭಾರತದಲ್ಲಿ ಮತ್ತು ನಿಕೊಬಾರ್ ದ್ವೀಪಗಳಲ್ಲಿ ವಾಸಿಸುತ್ತದೆ. ಇದರ ಅಂದದ ಚರ್ಮದ ಬೇಟೆಯೂ ಈ ಪಟ್ಟೆ ಹೆಬ್ಬಾವಿನ ವಂಶವನ್ನು ವಿಪತ್ತಿನಲ್ಲಿ ಸಿಲುಕಿಸಿದೆ.

## ಮೊಟ್ಟೆ ತಿನ್ನುವ ಹಾವು

*(ಇಂಡಿಯನ್ ಎಗ್ ಈಟಿಂಗ್ ಸ್ನೇಕ್) Elactristodon westermanni*
**Reinhardt**

ಇದು ತೀರಾ ಅಪರೂಪಕ್ಕೆ ನೋಡಸಿಗುವ ಹಾವು. ಮೊಟ್ಟೆ ಇದರ ಅತಿ ಪ್ರಮುಖ ಆಹಾರವಾಗಿರುವುದರಿಂದಲೇ ಇದಕ್ಕೆ 'ಮೊಟ್ಟೆ ತಿನ್ನುವ ಹಾವು' ಎಂಬ ಹೆಸರು ಬಂದಿದೆ. ಪಕ್ಷಿಗಳ ಹಾಗೂ ಇತರ ಸರೀಸೃಪಗಳ ಮೊಟ್ಟೆಯನ್ನು ಇದು ಹುಡುಕಿ ತಿನ್ನುತ್ತದೆ. ನೋಡಲು ಇದು ಮಾರ್ಜಾಲ ಸರ್ಪದಂತೆ ಕಂಡರೂ ಇದರ ದೇಹ ಅದಕ್ಕಿಂತ ನೀಳವಾಗಿದೆ. ಈ ಹಾವಿನ ತಲೆಯನ್ನು ದೇಹದ ಇತರ ಭಾಗದಿಂದ ಪ್ರತ್ಯೇಕಿಸಿ ಗುರುತಿಸುವುದು ಕೊಂಚ ಕಷ್ಟವೇ. ಏಕೆಂದರೆ ತಲೆಭಾಗದಲ್ಲಿ ವಿಶೇಷ ಆಕಾರವಾಗಲೀ ಬಣ್ಣವಾಗಲೀ ಇಲ್ಲ. ಮೈಬಣ್ಣ ಕಪ್ಪಾಗಿದ್ದು, ದೇಹದುದ್ದಕ್ಕೂ ಒಂದು ಹಳದಿ ಪಟ್ಟಿ ಇದರ ಕುತ್ತಿಗೆಯವರೆಗೆ ಬಂದು, ಕಣ್ಣಿನ ಮೇಲ್ಭಾಗದಲ್ಲಿ ಮುಗಿಯುತ್ತದೆ. ಕಣ್ಣಿನ ಮೂಲೆಯಿಂದ ಕುತ್ತಿಗೆಯವರೆಗೆ ಒಂದು ಕಪ್ಪು ಪಟ್ಟಿ ಹಬ್ಬಿರುವುದನ್ನು ಮಸಕಾಗಿ ಗುರುತಿಸಬಹುದು.

ಮೊಟ್ಟೆ ತಿನ್ನಲಿಕ್ಕೇ ಇದರ ಬಾಯಿ ವಿಶೇಷ ರೀತಿಯಲ್ಲಿ ವಿಕಾಸಗೊಂಡಿದೆ. ತಿದಿಯಂಥ ರಚನೆಯುಳ್ಳ ಬಾಯಿ, ವಿಸ್ತಾರವಾಗಿ ಹಿಗ್ಗಬಲ್ಲ ಗಂಟಲು ಇವೆರಡರ ನೆರವಿನಿಂದ ಈ ಹಾವು ತನ್ನ ಬಾಯಿಗಿಂತ 3–4ಪಟ್ಟು ದೊಡ್ಡ ಗಾತ್ರದ ಮೊಟ್ಟೆಯನ್ನು ಸಲೀಸಾಗಿ ನುಂಗುತ್ತದೆ. ಗಂಟಲು ನಾಳದಲ್ಲಿ ಇಕ್ಕಳದಂಥ ಮೊನಚು ಮೊಳೆಗಳಿದ್ದು, ಇವು ಒಳಗೆ ಸಾಗುವ ಮೊಟ್ಟೆಯನ್ನು ಒಡೆದು ಅನ್ನನಾಳದೊಳಕ್ಕೆ ನೂಕುತ್ತವೆ.

# ಉಭಯವಾಸಿಗಳು

ಇದಕ್ಕೆ ಇಂಗ್ಲೀಷ್‌ನಲ್ಲಿ 'ಅಂಫೀಬಿಯನ್ಸ್' ಎನ್ನುತ್ತಾರೆ. ಈ ಗ್ರೀಕ್ ಪದದ ಅರ್ಥ 'ಎರಡು ಜೀವ' ಎಂದಾಗುತ್ತದೆ. ಕನ್ನಡದಲ್ಲಿ ಈ ಬಗೆಯ ಪ್ರಾಣಿಗಳಿಗೆ 'ದ್ವಿಚರಿಗಳು' ಎಂದೂ ಹೇಳುತ್ತಾರೆ. ನೆಲ ಮತ್ತು ನೀರು ಎರಡರಲ್ಲೂ ಇವು ಸಲೀಸಾಗಿ ಬದುಕುತ್ತವೆ. ಕೆಲವು ಜೀವಿಗಳಲ್ಲಿ ಎಳೆ ಮರಿಗಳು ನೀರಿನಲ್ಲೇ ಹುಟ್ಟಿ, ಅಲ್ಲೇ ಪ್ರೌಢಾವಸ್ಥೆಗೆ ಬಂದು ಆನಂತರ ನೆಲದ ಮೇಲೂ ಸಾಕಷ್ಟು ಸಮಯ ಕಳೆಯುತ್ತವೆ. ಸುಮಾರು 35 ಕೋಟಿ ವರ್ಷಗಳ ಹಿಂದೆ ಕಡಲ ಜೀವಿಗಳಾಗಿದ್ದ 'ಕ್ರಾಸ್ಸೊಪ್ಟೆರೀಜಿಯನ್' ಎಂಬ ಪುರಾತನ ಮೀನುಗಳೇ ಕ್ರಮೇಣ ವಿಕಾಸಗೊಂಡು ಈಗಿನ ಉಭಯಜೀವಿಗಳಾಗಿವೆ. ಇಂದು ಇವುಗಳಲ್ಲಿ ಮೂರು ಸ್ತರಗಳಿವೆ. ನುಣುಪು ಹಾವುರಾಣಿಯಂಥ ಸ್ಯಾಲಮಾಂಡರ್ ಮತ್ತು ಮೊಂಡು ಬಾಲದ ನ್ಯೂಟ್‌ಗಳೂ ಸೇರಿದ 'ಕ್ವಾಡಾಟಾ' ಸ್ತರ; ಕಪ್ಪೆಗಳೂ, ನೆಲಗಪ್ಪೆಗಳೂ ಸೇರಿದ 'ಸೇಲಿಯೆಂಶಿಯಾ' (ಅಥವಾ ಅನೂರಾ) ಸ್ತರ; ಮತ್ತು ಕುರುಡು ಹುಳಗಳ 'ಜಿಮ್ನೊಫೋನಿಯಾ' ಸ್ತರ.

ಉಭಯವಾಸಿಗಳ ಚರ್ಮ ಸದಾ ಒದ್ದೆಯಾಗಿರಬೇಕು. ಅವು ಸೂರ್ಯನ ತಾಪವನ್ನು ಹೆಚ್ಚು ಕಾಲ ಸಹಿಸಲಾರವು. ಇವು ಶ್ವಾಸಕೋಶದ ಮೂಲಕವಷ್ಟೇ ಅಲ್ಲ, ಚರ್ಮದ ಮೂಲಕವೂ ಉಸಿರಾಡುತ್ತವೆ. ಉರಗಗಳಿಗಿಂತ ಇವು ಭಿನ್ನವಾಗಿರಲು ಇನ್ನೊಂದು ಮುಖ್ಯ ಕಾರಣವೂ ಇದೆ. ಉರಗಗಳು ನೆಲದ ಮೇಲೆ ಮೊಟ್ಟೆ ಇಡುತ್ತವಾದರೆ, ಇವು ನೀರಲ್ಲಿಯೇ ಮೊಟ್ಟೆ ಇಡುತ್ತವೆ.

ಕಪ್ಪೆಗಳೂ, ನೆಲಗಪ್ಪೆಗಳೂ ಒಂದೊಂದು ಬಾರಿಗೆ ಸಾವಿರಾರು ಮೊಟ್ಟೆ ಇಡುತ್ತವೆ. ಅವುಗಳಲ್ಲಿ ಬಹುಪಾಲು ಮೊಟ್ಟೆಗಳು ನಾಶವಾಗುತ್ತವಾದರೂ, ಸಂತಾನವೃದ್ಧಿಗೆ ಅಗತ್ಯವಿರುವಷ್ಟು ಮೊಟ್ಟೆಗಳು ಉಳಿದುಕೊಳ್ಳುತ್ತವೆ. ಇಂದು ಕಾಣುವ ಬಹುಪಾಲು ಕಪ್ಪೆಗಳಲ್ಲಿ ಸಂತಾನವೃದ್ಧಿಗಾಗಿ ನಡೆಸುವ ಮೈಥುನ ಕಾರ್ಯ ಒಂದೇ ತೆರನಾಗಿರುತ್ತದೆ. ಹೆಣ್ಣು ಕಪ್ಪೆ ತನ್ನ ಶರೀರದಿಂದ ನೊರೆ ರೂಪದಲ್ಲಿ ಮೊಟ್ಟೆಗಳನ್ನು ಕಕ್ಕುತ್ತಿರುವಾಗ ಗಂಡು ಅದರ ಕುತ್ತಿಗೆಯನ್ನು ಅಮುಕಿ ಹಿಡಿದು ಆ ಮೊಟ್ಟೆಗಳನ್ನು ಫಲಿತಗೊಳಿಸುತ್ತದೆ. ಹೀಗೆ ಹೆಣ್ಣಿನ ಲೋಳೆ ಶರೀರವನ್ನು ಗಟ್ಟಿಯಾಗಿ ಅಮುಕಿ ಹಿಡಿಯಲೆಂದೇ ಸಂತಾನವೃದ್ಧಿಯ ಋತುಗಳಲ್ಲಿ ಗಂಡಿನ ಹಸ್ತಗಳ ಮೇಲೆ ಮುಳ್ಳಿನಂಥ ಅಂಗಗಳು ಮೊಳೆಯುತ್ತವೆ.

ಹಲ್ಲಿಗಳಂತೆ ಕಾಣುವ, ಆದರೆ ಅವುಗಳಂತೆ ಒಣಗಿದ, ಗೀರುಗೀರಿನ ಚರ್ಮವಿಲ್ಲದ ನ್ಯೂಟ್ ಮತ್ತು ಸ್ಯಾಲಮಾಂಡರ್‌ಗಳಿಗೆ ಜೀವನದುದ್ದಕ್ಕೂ ಒಂದು ಪುಟ್ಟ ಬಾಲ ಇದ್ದೇ ಇರುತ್ತದೆ. ಅದಕ್ಕೇ ಅವುಗಳನ್ನು ಕ್ವಾಡೇಟಾ ಅಥವಾ 'ಯುರೊಡೆಲಾ' (ಅಂದರೆ ಕಣ್ಣಿಗೆ ಕಾಣುವಂಥ ಬಾಲವುಳ್ಳವು) ಎಂಬ ಸ್ತರದಲ್ಲಿ ವರ್ಗೀಕರಿಸಲಾಗಿದೆ. ಅವುಗಳ ದೇಹ ಒದ್ದೆಯಾಗಿರುತ್ತದೆ. ಸ್ಯಾಲಮಾಂಡರ್‌ಗಳು

ಕಪ್ಪೆಗಳಂತೆ ಮಿಥುನ ಕಾಲದಲ್ಲಿ ಅರಚುವುದಿಲ್ಲ. ಕೆಲವು ಪ್ರಭೇದಗಳು ಕೀಚಲು ಸ್ವರ ಹೊಮ್ಮಿಸುತ್ತವಾದರೂ ಅವು ನಮ್ಮ ಕಿವಿಗೆ ಕೇಳಿಸುವಷ್ಟು ಸುಸ್ಪಷ್ಟವಾಗಿರುವುದಿಲ್ಲ. ಅವುಗಳ ಶ್ರವಣ ಶಕ್ತಿಯೂ ತುಂಬ ಕ್ಷೀಣ. ಹೊರಕ್ಕೆ ಕಾಣುವಂಥ ಕಿವಿಗಳೂ ಸ್ಯಾಲಮಾಂಡರ್‌ಗಳಿಗೆ ಇಲ್ಲ. ನ್ಯೂಟ್‌ಗಳು ನಿಖರವಾದ ಮಿಥುನ ನಡವಳಿಕೆ ತೋರ್ಪಡಿಸುವುದುಂಟು.

ಅಪರೂಪಕ್ಕೆ ಕೆಲವು ಪುರಾತನ ಪ್ರಭೇದಗಳು ಕಪ್ಪೆಗಳಲ್ಲಿ ಕಾಣುವಂಥ ಬಾಹ್ಯ ಸಂಭೋಗ ಕ್ರಿಯೆ ನಡೆಸುತ್ತವಾದರೂ ಬಹಳಷ್ಟು ನ್ಯೂಟ್‌ಗಳಲ್ಲಿ ಸಂತಾನಕ್ರಿಯೆ ಅವುಗಳ ದೇಹದಲ್ಲೇ ಅಂತರ್ಗತವಾಗಿರುತ್ತದೆ. ಗಂಡು ನ್ಯೂಟ್ ತನ್ನ ವೀರ್ಯಾಣುಗಳ ಪುಟ್ಟ ಗಂಟನ್ನು ಹೆಣ್ಣಿನ ಪೃಷ್ಠದ್ವಾರದ ಬಳಿ ಠೇವಣಿ ಇಟ್ಟು ಹೋಗುತ್ತದೆ. ಹೆಣ್ಣು ಅದನ್ನು ತನ್ನ ದೇಹದೊಳಕ್ಕೆ ಕೆಲಕಾಲ ಬಚ್ಚಿಟ್ಟುಕೊಂಡು ಮೊಟ್ಟೆ ಇಡುವ ಕಾಲದಲ್ಲಿ ಅವಕ್ಕೆ ವೀರ್ಯದ ಸ್ಪರ್ಶವಾಗುವಂತೆ ನೋಡಿಕೊಳ್ಳುತ್ತದೆ.

ಉಭಯವಾಸಿಗಳ ಮೂರು ಸ್ತರಗಳಲ್ಲಿ ನೆಲಗಪ್ಪೆಗಳ ವಂಶವೇ ಅತಿ ದೊಡ್ಡದು. ಸುಮಾರು 2,000 ವಂಶಗಳಿಗೆ ಸೇರಿದ ನೆಲಗಪ್ಪೆಗಳನ್ನು ಈವರೆಗೆ ಗುರುತಿಸಲಾಗಿದೆ. ಇವೆಲ್ಲ ಸೇರಿ 'ಅನೂರಾ' (ಅಂದರೆ ಬಾಲವಿಲ್ಲದವು) ಸ್ತರ ನಿರ್ಮಿಸಲಾಗಿದೆ. ಇದೇ ಇವುಗಳ ಪ್ರಮುಖ ಲಕ್ಷಣ. ಚಿಕ್ಕ ದೇಹದ ಈ ಜೀವಿಗಳಿಗೆ ಕುಪ್ಪಳಿಸಲು ಅನುವಾಗುವಂತೆ ಉದ್ದುದ್ದ ಹಿಂಗಾಲುಗಳಿವೆ.

'ಬ್ಯುಫೊ' ಜಾತಿಗೆ ಸೇರಿದ ನೆಲಗಪ್ಪೆಗಳಿಗೆ ಅಂಥ ಏನೂ ಕುಪ್ಪಳಿಸುವ ಸಾಮರ್ಥ್ಯ ಇಲ್ಲ. ಅವುಗಳ ಕಾಲು ಚಿಕ್ಕದಾಗಿದ್ದು, ಪುಟ್ಟ ಪುಟ್ಟ ನೆಗೆತಗಳಲ್ಲಿ ಸರಸರನೆ ಅವು ಚಲಿಸುತ್ತವೆ. ಕೀಟವಾಗಲೀ, ಹುಳುವಾಗಲೀ ಕಣ್ಣಿಗೆ ಬಿದ್ದೊಡನೆ ನೆಲಗಪ್ಪೆ ಕೊಂಚಕಾಲ ತನ್ನ ಬೇಟೆಯನ್ನು ಹಿಂಬಾಲಿಸುತ್ತದೆ. ನಂತರ ಥಕ್ಕೆಂದು ತನ್ನ ಉದ್ದವಾದ ಅಂಟುಳ್ಳ ನಾಲಗೆಯನ್ನು ಹೊರಚಾಚಿ (ಇದು ಆರೇಳು ಸೆಂಟಿಮೀಟರ್‌ನಷ್ಟು ಉದ್ದಕ್ಕೆ ಚಾಚಬಹುದು) ಬೇಟೆಯನ್ನು ಬಾಯೊಳಕ್ಕೆ ಸೆಳೆದುಕೊಳ್ಳುತ್ತದೆ.

ನೆಲಗಪ್ಪೆಯ ಜೀವನದ ಬಹುಭಾಗವೆಲ್ಲ ನೆಲದ ಮೇಲೆಯೇ ಕಳೆಯುತ್ತದೆ. ಸಂತಾನವೃದ್ಧಿಯ ದಿನಗಳಲ್ಲಿ ಮಾತ್ರ ಇದು ನೀರಿಗೆ ಹಿಂದಿರುಗುತ್ತದೆ. ಈ ಕಪ್ಪೆಗಳ ಚರ್ಮದ ಮೇಲೆ ಗುಳ್ಳೆಗಳಂತೆ ಕಾಣುವುದು ಕಪ್ಪೆಯ ಗ್ರಂಥಿಗಳು. ಅವಕ್ಕೂ, ಮನುಷ್ಯರ ಮೈಮೇಲೆ ಆಗಾಗ ಕಂಡುಬರುವ ಗಂತಿಗುಳ್ಳೆಗಳಿಗೂ ಏನೂ ಸಾಮ್ಯ ಇಲ್ಲ. ಕಪ್ಪೆಗಳನ್ನು ಮುಟ್ಟಿದ್ದಕ್ಕೇ ಇಂಥ ಗಂತಿಗಳು ಮನುಷ್ಯರ ಮೈಮೇಲೆ ಏಳುತ್ತವೆಂಬುದು ಮೂಢನಂಬಿಕೆ ವಿನಾ ಇದರಲ್ಲಿ ಸತ್ಯಾಂಶ ಇಲ್ಲ.

ಕೃಷಿಯಲ್ಲಿ ಬಳಸುವ ರಾಸಾಯನಿಕಗಳಿಂದಾಗಿ ನಮ್ಮ ಕಪ್ಪೆಗಳಿಗೆ ಕುತ್ತು ಬಂದಿದೆ. ಮಾನವ ಬಳಕೆಯಿಂದಾಗಿ ಕಪ್ಪೆ ಕಾಲಿನ ರಫ್ತು ಚಟುವಟಿಕೆ ಕೂಡಾ ಅವುಗಳ ನಿರ್ನಾಮಕ್ಕೆ ಕಾರಣವಾಗಿದೆ. ನಮ್ಮ ದೇಶದ ಕೆಲವು ಅಪರೂಪದ ಹಾಗೂ ಅಪರೂಪವಾಗುತ್ತಿರುವ ದ್ವಿಚರಿಗಳ ಉದಾಹರಣೆಗಳು ಇಲ್ಲಿವೆ.

### ಹಿಮಾಲಯದ ನ್ಯೂಟ್

*Tylototriton Verrucosus* Anderson

ದಾರ್ಜೀಲಿಂಗ್, ಸಿಕ್ಕಿಂ, ಅರುಣಾಚಲ ಪ್ರದೇಶ ಮತ್ತು ಮಣಿಪುರಗಳಲ್ಲಿ ಕಾಣಸಿಗುವ ಈ ಸ್ಯಾಲಮಾಂಡರ್‌ಗೆ ಕೊಳವೆಯಂಥ ಕಂದುಕಪ್ಪಿನ ನೀಳ ದೇಹವಿದ್ದು, ಚಪ್ಪಟೆ ತಲೆ, ಎರಡು ಜೋಡಿ ಕಾಲು ಹಾಗೂ ಲಂಬಕೋನದಲ್ಲಿ ಚಪ್ಪಟೆಯಾದ ಬಾಲವಿರುತ್ತದೆ. ಬೆನ್ನ ಮೂಳೆಯ ದಿಬ್ಬದ ಎರಡೂ ಪಕ್ಕಗಳಲ್ಲಿ ಕೊಕ್ಕೆಯಂಥ ರಂಧ್ರಮಯ ಪುಟ್ಟ ಪುಟ್ಟ ಗಂತಿಗಳ ಸಾಲುಗಳಿವೆ.

ಭಾರತದಲ್ಲಿ ಕಾಣಬರುವ ಸ್ಯಾಲಮಾಂಡರ್ ಅಂದರೆ ಇದೊಂದೇ. ಇದರ ಆಹಾರ: ಜಲಸಸ್ಯಗಳು, ಗೊದಮೊಟ್ಟೆ, ಕೀಟಗಳ ಮರಿಹುಳುಗಳು ಮತ್ತು ಎರೆಹುಳ.

### ಮಲಬಾರಿನ ಮರಗಪ್ಪೆ

*Nectophrydne tuberculosa* (Gunther)

ಕೇರಳದ ಮಲಬಾರ್ ಪ್ರಾಂತದಲ್ಲಿ ವಾಸಿಸುವ ಈ ಪುಟ್ಟ ಕಪ್ಪೆಗೆ ಅಚ್ಚಗಪ್ಪಿನ ನೀಳ ದೇಹವಿದೆ. ಜಾಲಪಾದಗಳಿವೆ. ಅತಿ ಮಳೆ ಬೀಳುವ ಪ್ರದೇಶಗಳಲ್ಲಿ, ಕೆರೆ, ಸರೋವರ, ನದಿಗಳ ತಡಿಯಲ್ಲಿ, ಚಿಕ್ಕಪುಟ್ಟ ಗಿಡಗಂಟಿಗಳ ಮಧ್ಯೆ ಈ ಕಪ್ಪೆ ಕಂಡುಬರುತ್ತದೆ. ಇದರ ವಂಶದ ನಿಖರ ನಡವಳಿಕೆಗಳಾಗಲೀ, ವಾಸಸ್ಥಾನದ ವೈಶಿಷ್ಟ್ಯಗಳಾಗಲೀ ಪೂರ್ತಿ ಗೊತ್ತಾಗಿಲ್ಲ.

### ಗಾರೋ ಗುಡ್ಡಗಳ ಮರಗಪ್ಪೆ

*Nectophryne Kempi* Boulenger

ಮೇಘಾಲಯದ ಗಾರೋ ಗುಡ್ಡಗಾಡು ಪ್ರದೇಶಗಳಲ್ಲಿ ಈ ಕಪ್ಪೆಗಳನ್ನು ಕಾಣಬಹುದು. ಪುಟ್ಟ ದೇಹದ ಈ ಕಪ್ಪೆಯ ಮುಂಗಾಲು ಹಾಗೂ ಹಿಂಗಾಲುಗಳಿಗೂ ಬೆರಳುಗಳ ಮಧ್ಯೆ ಜಾಲದ ಪೊರೆ ಇದೆ. ಬೆರಳುಗಳ ತುದಿ ಮೊಂಡಾಗಿದ್ದು, ಪೊರೆ ಅಷ್ಟು ಸುಲಭವಾಗಿ ಕಾಣುವುದಿಲ್ಲ. ಈ ವಂಶದ ಬಗ್ಗೆ ಕೂಡಾ ವಿವರ ಮಾಹಿತಿಗಳು ಲಭ್ಯವಾಗಿಲ್ಲ.

## ಅಕಶೇರುಕಗಳು

ಹುಳುಗಳು, ಹವಳಗಳು, ಸಮುದ್ರ ಸೌತೆ, ಕೀಟಗಳು, ಸಿಂಪಿ(ಮೃದ್ವಂಗಿ)ಗಳು, ನಕ್ಷತ್ರಮೀನುಗಳು ಇವೇ ಮುಂತಾದ ಅಕಶೇರುಕಗಳು (ಅಂದರೆ – ಬೆನ್ನು ಮೂಳೆ ಇಲ್ಲದ ಪ್ರಾಣಿಗಳು) ಒಟ್ಟು ಜೀವಲೋಕದ ಭಾರೀ ದೊಡ್ಡ ಭಾಗವನ್ನು

ಪ್ರತಿನಿಧಿಸುತ್ತವೆ. ಪ್ರಪಂಚದ ಎಲ್ಲ ಬಗೆಯ ಜೀವತಾಣದಲ್ಲೂ ಕಂಡುಬರುವ ಈ ಪ್ರಾಣಿಗಳು ಭೂಮಿಯ ಜೀವಜಾಲದ ಒಂದು ಮಹತ್ವದ, ಅವಿಭಾಜ್ಯ ಅಂಗವಾಗಿವೆ. ದೊಡ್ಡ ಪ್ರಾಣಿಗಳ ಆಹಾರ ಮೂಲವಾಗಿ, ಆಹಾರ ಸರಪಣಿಯ ಆದಿಕೊಂಡಿಗಳಾಗಿರುವ ಈ ಅಕಶೇರುಕಗಳಿಲ್ಲದೇ ಮೇಲುಸ್ತರದ ಪ್ರಾಣಿಗಳು ಬದುಕಲಾರವು. ಆದ್ದರಿಂದಲೇ ಜೀವಿ ಸಂರಕ್ಷಣೆಯ ಚರ್ಚೆ ಬಂದಾಗಲೆಲ್ಲ ಕಶೇರುಕಗಳಿಗೆ ನೀಡುವಷ್ಟೇ ಪ್ರಾಮುಖ್ಯವನ್ನು ಅಕಶೇರುಕಗಳಿಗೂ ಕೊಡಬೇಕಾಗುತ್ತದೆ. ಆದರೆ ಸಂರಕ್ಷಣಾವಾದಿಗಳು ಈ ಕುರಿತು ಸಾಕಷ್ಟು ಗಮನ ಹರಿಸಿಲ್ಲ. ಉರಗಗಳಿಗೆ, ಪಕ್ಷಿಗಳಿಗೆ ಹಾಗೂ ಸ್ತನಿಗಳಿಗೆ ತಮ್ಮೆಲ್ಲ ಆದ್ಯತೆಯನ್ನು ಮೀಸಲಾಗಿಟ್ಟಿದ್ದಾರೆ. ಕೆಳಸ್ತರದ ಜೀವಿಗಳ ಮೇಲೆ ಗಂಭೀರ ಪರಿಣಾಮ ಬೀರಬಹುದಾದ ಆವಾಸಧ್ವಂಸ, ಪರಿಸರ ಪರಿವರ್ತನೆಯೇ ಮುಂತಾದ ಗಂಭೀರ ಸಂಗತಿಗಳನ್ನು ಕಡೆಗಣಿಸಿದ್ದಾರೆ. ಇದರಿಂದಾಗಿ ಎಷ್ಟೋ ಅಕಶೇರುಕ ಜೀವಿಗಳು, ಅವುಗಳ ಅಸ್ತಿತ್ವ ನಮಗೆ ಗೊತ್ತಾಗುವ ಮೊದಲೇ, ಅಳಿದುಹೋಗುವ ತೀವ್ರ ಸಾಧ್ಯತೆ ಕಾಣುತ್ತಿದೆ. ಈ ವರ್ಗದ ಬಹಳಷ್ಟು ಜೀವಿಗಳ ಸ್ಥಿತಿಗತಿಯ ಬಗೆಗೆ ಮೂಲಭೂತ ಮಾಹಿತಿ ಸಹ ಸಿಗುವುದಿಲ್ಲವಾಗಿದೆ.

ಅಕಶೇರುಕಗಳು ನಿರ್ವಂಶವಾಗಲು ಅಥವಾ ಅಳಿವಿನ ಅಂಚಿಗೆ ಬರಲು ಅನೇಕ ಕಾರಣಗಳಿರಬಹುದು. ಅರಣ್ಯನಾಶದಿಂದಾಗಿ ಆವಾಸಧ್ವಂಸವಾಗಬಹುದು; ಏಕಸಸ್ಯ ಅರಣ್ಯ ಅಥವಾ ನೆಡುತೋಪಿನಿಂದಾಗಿ ಅವು ಕಣ್ಮರೆಯಾಗಬಹುದು; ಇಲ್ಲವೆ ಕೀಟನಾಶಕಗಳ ಅತಿ ಬಳಕೆಯಿಂದ ಅವು ಸಾಯಬಹುದು. ಜೀವ ವಿಜ್ಞಾನಿಗಳೂ ಕಾಲೇಜು ವಿದ್ಯಾರ್ಥಿಗಳೂ ತಮ್ಮ ಅಧ್ಯಯನಕ್ಕೆ ಕೀಟಗಳ ಮಾದರಿ ಸಂಗ್ರಹಣೆ ಮಾಡಲೆಂದು ವರ್ಷ ವರ್ಷವೂ ಒಂದೇ ತಾಣಕ್ಕೆ ದಾಳಿ ಇಡುವುದರಿಂದಲೂ ಅವುಗಳ ಸಂಖ್ಯೆ ಕಡಿಮೆಯಾಗಬಹುದು. ತಮಿಳುನಾಡಿನ ಕ್ರುಸಾಡಿ ದ್ವೀಪಗಳಲ್ಲಿ ಹಾಗೂ ಗುಜರಾತಿನ ಓಖಾ ಎಂಬಲ್ಲಿ ಹೀಗೆ ಆಗಿದ್ದಿದೆ. ಹವಳ, ಸಿಂಪುಗಳನ್ನು ವಾಣಿಜ್ಯ ಉದ್ದೇಶಕ್ಕೆಂದು ಭಾರೀ ಪ್ರಮಾಣದಲ್ಲಿ ಕಲೆ ಹಾಕುವುದು, ಸಿಮೆಂಟ್ ಕಾರ್ಖಾನೆಗೆಂದು ಹವಳದ ದಿಬ್ಬಗಳನ್ನು ಅಗೆಯುವುದೂ ಅವುಗಳ ನಾಶಕ್ಕೆ ಕಾರಣವಾಗುತ್ತಿದೆ.

ಅಪರೂಪದ, ಅಳಿವಿನಂಚಿನ ಅಕಶೇರುಕಗಳಲ್ಲಿ ಕೀಟ ಮತ್ತು ಕಂಟಕ ಚರ್ಮಿಗಳ ಅನೇಕ ವಂಶಗಳನ್ನು ಹೆಸರಿಸಬಹುದು. ಹಿಂದೂ ಮಹಾಸಾಗರ ಮತ್ತು ಶಾಂತ ಸಾಗರದ ದ್ವೀಪಗಳಲ್ಲಿ ಕಾಣಸಿಗುವ ಡಕಾಯಿತ ಏಡಿ ಅಥವಾ ತೆಂಗಿನ ಏಡಿ (**Birgus latro**) ಇದಕ್ಕೊಂದು ಉತ್ತಮ ಉದಾಹರಣೆಯಾಗಿದೆ. ಗ್ರೇಟ್ ನಿಕೋಬಾರ್ ದ್ವೀಪ ಮತ್ತು ದಕ್ಷಿಣ ಸೆಂಟಿನೆಲ್ ದ್ವೀಪಗಳಲ್ಲಿ ಅಪರೂಪಕ್ಕೆ ಕಾಣಸಿಗುವ ಇದು ಒಂದು ಅಡಿಗಿಂತ ಉದ್ದವಾಗಿದ್ದು, ತೆಂಗಿನ ಮರಗಳ ಬುಡದಲ್ಲಿ ಗುಂಡಿ ತೋಡಿ, ತೆಂಗಿನ ನಾರಿನ ಸಿಂಬೆಯನ್ನು ಹಾಸಿ ಪೊಟರೆ ನಿರ್ಮಿಸಿಕೊಳ್ಳುತ್ತದೆ. ಅದರ ಇಕ್ಕಳದಂಥ ಕೊಂಬುಗಳು ಭಾರೀ ಬಲಿಷ್ಠವಾಗಿದ್ದು ತೆಂಗಿನ ಸಿಪ್ಪೆಯನ್ನು ನಾರುನಾರಾಗಿ ಸೀಳಬಲ್ಲವಾಗಿವೆ. ಹಾಗೆ ಸಿಪ್ಪೆ ತೆಗೆದ ತೆಂಗಿನ ಕಾಯಿಯ ಚಿಪ್ಪನ್ನು ಕೆರೆದು ಕೆರೆದು

ಒಳಗಿದ್ದ ಬಿಳಿ ತೆಂಗನ್ನು ತಿನ್ನುತ್ತದೆ. ಈಗೀಗ ಅಡುಗೆಗೆಂದು ಈ ಏಡಿಯನ್ನು ಅತಿಯಾಗಿ ಬೇಟೆಯಾಡಿದ್ದರಿಂದ ಇವುಗಳ ಸಂತತಿ ಕಣ್ಮರೆಯಾಗುತ್ತಿದೆ.

## ಕೀಟಗಳು

ಪ್ರಾಣಿ ಪ್ರಪಂಚದಲ್ಲಿ ಕೀಟಗಳೇ ಇತರೆಲ್ಲ ಜೀವಿಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿವೆ: ಈಗಾಗಲೇ ಹತ್ತು ಲಕ್ಷಕ್ಕಿಂತ ಹೆಚ್ಚು ಕೀಟವಂಶಗಳು ಪತ್ತೆಯಾಗಿದ್ದು, ಇನ್ನೂ ಅನೇಕ ವಂಶಗಳು ಕೀಟ ವಿಜ್ಞಾನಿಗಳ ಗಮನಕ್ಕೆ ಬಾರದೇ ಉಳಿದಿರಬಹುದು. ಕೀಟದ ದೇಹವನ್ನು ತಲೆ, ಎದೆ ಮತ್ತು ಕಿಬ್ಬೊಟ್ಟೆ ಎಂಬ ನಿರ್ದಿಷ್ಟ ಮೂರು ಭಾಗಗಳನ್ನಾಗಿ ನೋಡಲು ಸಾಧ್ಯವಿದೆಯಾದ್ದರಿಂದ ಲ್ಯಾಟಿನ್ ಭಾಷೆಯಲ್ಲಿ 'ಇನ್ಸೆಕ್ಟಮ್' (ಭಾಗ ಮಾಡು) ಎಂಬ ಪದದಿಂದ ಇಂಗ್ಲಿಷ್ ಭಾಷೆಯಲ್ಲಿ 'ಇನ್‌ಸೆಕ್ಟ್ಸ್' ಎಂಬುದಾಗಿ ಇವುಗಳಿಗೆ ಹೆಸರಿಡಲಾಗಿದೆ.

ಕಳೆದ 35 ಕೋಟಿ ವರ್ಷಗಳಿಂದ ಅಸ್ತಿತ್ವದಲ್ಲಿರುವ ಕೀಟಗಳು ಇಂದು ಅಸಂಖ್ಯ ರೂಪಗಳಲ್ಲಿ, ವಿಧವಿಧ ಬಣ್ಣಗಳಲ್ಲಿ, ಅದ್ಭುತ ವಿನ್ಯಾಸಗಳಲ್ಲಿ ವಿಕಾಸಗೊಂಡು ಭೂಮಿಯ ಎಲ್ಲಾ ಬಗೆಯ ಪರಿಸರಗಳಲ್ಲೂ ಆವಾಸಗಳನ್ನು ನಿರ್ಮಿಸಿಕೊಂಡು, ಅಲ್ಲಲ್ಲಿನ ಅನುಕೂಲಕ್ಕೆ ತಕ್ಕಂತೆ ತಮ್ಮ ದೇಹವನ್ನೂ ನಡವಳಿಕೆಯನ್ನೂ ಮಾರ್ಪಡಿಸಿಕೊಂಡು ಜೀವಿಸುತ್ತಿವೆ. ಕೆಲವಂತೂ 70 ಡಿಗ್ರಿ ಸೆಲ್ಸಿಯಸ್ ತಾಪದ ಬಿಸಿನೀರ ಚಿಲುಮೆಗಳ ಬಳಿ ಅಥವಾ ಉರಿ ತಾಪದ ಮರುಭೂಮಿಯಲ್ಲಿ ವಾಸಿಸುತ್ತವೆ. ಇನ್ನು ಕೆಲವು ತುಂಬಾ ಚಳಿಯ ಪರಿಸರದಲ್ಲಿ ಬದುಕಬಹುದು; ಘಾಟು ವಿಷಗಳ ರಸಾಯನದ ಮಧ್ಯೆಯೂ ಜೀವಿಸಬಹುದು. ಪ್ರಪಂಚದ ಎಲ್ಲೆಡೆಯಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ವ್ಯಾಪಿಸಿರುವ ಕೀಟಗಳು ಪ್ರಾಣಿ ಲೋಕದ ಅತ್ಯಂತ ಯಶಸ್ವೀ ಜೀವಿಗಳೆಂದು ಪರಿಗಣಿಸಬಹುದು.

ಭಾರತದಲ್ಲಿ ಕೀಟಜಂತುಗಳ ಸಮೃದ್ಧ ಭಂಡಾರವೇ ಇದ್ದು ಇಲ್ಲಿ 50,000ಕ್ಕೂ ಹೆಚ್ಚಿನ ಕೀಟವಂಶಗಳಿವೆ. ಅವು ಎಂಥದೇ ಕಠಿಣ ಪರಿಸರಕ್ಕೂ ಒಗ್ಗಿಕೊಳ್ಳುತ್ತವೆಂಬುದು ನಿಜವಾದರೂ, ನಿರಂತರವಾಗಿ ಅವುಗಳ ವಾಸಸ್ಥಾನದ ಅವನತಿಯಾಗುತ್ತಿದೆ; ಅದರಲ್ಲೂ ವಿಶೇಷವಾಗಿ ಕೀಟನಾಶಕಗಳ ಅತಿ ಬಳಕೆಯಿಂದಾಗಿ ಅನೇಕ ಬಗೆಯ ಕೀಟ ವಂಶಗಳು ಅವನತಿಯ ಮಾರ್ಗ ತುಳಿಯುವಂತಾಗಿದೆ. ಇವುಗಳ ಬಗ್ಗೆ ನಿಖರ ಮಾಹಿತಿ ಸಿಕ್ಕಿಲ್ಲವಾದರೂ, ನಿರ್ವಂಶವಾಗುವ ಅನೇಕ ಕೀಟ ವಂಶಗಳನ್ನು ಗುರುತಿಸಲಾಗಿದ್ದು ವನ್ಯಜೀವಿ (ಸಂರಕ್ಷಣಾ) ಕಾಯಿದೆಯ ಅಡಿಯಲ್ಲಿ ಅವಕ್ಕೆ ಭದ್ರತೆ ನೀಡಲಾಗುತ್ತಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

## ಚಿಟ್ಟೆ, ಪಾತರಗಿತ್ತಿಗಳು

*(ಲೆಪಿಡೊಪ್ಪೆರಾ)*

ಲೆಪಿಡೊಪ್ಟೆರಾ ಸ್ತರದಲ್ಲಿ ಬರುವ ಚಿಟ್ಟೆ ಮತ್ತು ಪಾತರಗಿತ್ತಿಗಳು ವಿವಿಧ ಬಣ್ಣಗಳ ಅತ್ಯಂತ ರಂಜನೀಯ ಜೀವಿಗಳಾಗಿವೆ. ಪಾತರಗಿತ್ತಿಗಳ ರೆಕ್ಕೆಯ ಮೇಲಿನ ಸೂಕ್ಷ್ಮ ಪೊರೆಗಳಲ್ಲಿ ಅಡಗಿರುವ ಬಣ್ಣದ ರಸಾಯನದಿಂದಾಗಿ ಅವು ಕಣ್ಣು ಕೋರೈಸುವ ಬಣ್ಣಗಳಲ್ಲಿ ಮಿಂಚುತ್ತವೆ. 'ಲೆಪಿಡೊಪ್ಟೆರಾ' ಎಂಬ ಗ್ರೀಕ್ ಮೂಲದ ಪದದ ಅರ್ಥವೇ 'ಪೊರೆಗಳ ರೆಕ್ಕೆ' ಎಂದಾಗುತ್ತದೆ. ಚಾವಣಿಗೆ ಹೊದೆಸಿದ ಹೆಂಚುಗಳ ಹಾಗೆ ಒಂದರ ಮೇಲೊಂದರಂತೆ ಪುಟ್ಟ ಪುಟ್ಟ ತೆಳು ಚಿಪ್ಪಿನಂಥ ಪೊರೆಪಕಳೆಗಳು ಇವುಗಳ ರೆಕ್ಕೆಗಳ ಉದ್ದಗಲಕ್ಕೆ ಜೋಡಣೆಗೊಂಡಿರುತ್ತವೆ. ರೆಕ್ಕೆಯನ್ನು ಕೈಯಲ್ಲಿ ಹಿಡಿದಾಗ ಈ ಪೊರೆಕಣಗಳು ಬಣ್ಣದ ಪುಡಿಯ ರೂಪದಲ್ಲಿ ನಮ್ಮ ಬೆರಳಿಗೆ ಮೆತ್ತಿಕೊಳ್ಳುತ್ತವೆ.

ಈ ಮೊದಲು ಹೇಳಿದ ಕಾರಣಗಳಿಂದಾಗಿ (ಆವಾಸ ಧ್ವಂಸ ಮತ್ತು ಕೀಟನಾಶಕ ಬಳಕೆ) ಭಾರತದ ಅನೇಕ ಲೆಪಿಡೊಪ್ಟೆರಾ ಸ್ತರದ ಜೀವಿಗಳು ನಾಶವಾಗುತ್ತಿವೆ. ಅವುಗಳಲ್ಲಿ ಕಾನೂನು ಪ್ರಕಾರ ಸಂರಕ್ಷಿತವೆಂದು ಘೋಷಿಸಲಾದ ಕೆಲವನ್ನು ಹೆಸರಿಸುವುದಾದರೆ: ಪಟ್ಟೆ ಮುಡ್ಡಿ ಪಾತರಗಿತ್ತಿ (ಬ್ಯಾಂಡೆಡ್ ಡಫರ್ – *Discophora deo deo),* ನೀಲಿಪೋಶಿ *(Biduanda melisa cyana),* ನವಿಲಕೇಶಿ (ಪೀಕಾಕ್ ಹೇರ್‌ಸ್ಟ್ರೀಕ್ – *Thelca pavo),* ಚಕ್ರವರ್ತಿ ಪಾತರಗಿತ್ತಿಗಳ ಅನೇಕ ವಂಶಗಳು *(Apatura ulupi ulupi, Dilipa morgiana, Euloceura manipurensis* ಇತ್ಯಾದಿ), ಮಲಬಾರಿನ ಪಟ್ಟೆ ಗುಬ್ಬಿ ಪುಕ್ಕ (ಬ್ಯಾಂಡೆಡ್ ಸ್ವಾಲೊಟೇಲ್ – *Papilio lio medon),* ಸಾಮಾನ್ಯ ದೊಣ್ಣೆ ಬಾಲ (ಕಾಮನ್ ಕ್ಲಬ್‌ಟೇಲ್ – *Polydorus coosambilianga),* ಎಲೆ ಕೋಸಿನ ಪಾತರಗಿತ್ತಿ (ಕ್ಯಾಬೇಜ್ ಬಟರ್‌ಫ್ಲೈ – *Pieris kruepen devta),* ಜಾಂಬಳೆ ಪಾತರಗಿತ್ತಿ (ಪರ್ಪಲ್ ಬುಶ್ ಬ್ರೌನ್ – *Mycalesis orseis nautilus)* ಮತ್ತು ಇನ್ನೂ ಅನೇಕ.

## ಒಡೊನಟಾ

ಡ್ರಾಗನ್ ಫ್ಲೈ ಮತ್ತು ಡ್ಯಾಮ್ಸೆಲ್ ಫ್ಲೈ ಎಂಬ ಹೆಸರಿನ ಅನೇಕ ಬಗೆಯ ಹಾರುವ ಕೀಟಗಳನ್ನು ಸೇರಿಸಿ ಒಡೊನಟಾ ಸ್ತರವನ್ನು ನಿರ್ಮಿಸಲಾಗಿದೆ. ತೆಳುವಾದ ಕಡ್ಡಿಯಂಥ ದೇಹದ, ಉದ್ದನ್ನ ದೋಣಿ ಹುಟ್ಟಿನಂಥ ರೆಕ್ಕೆಗಳಿರುವ ಇವಕ್ಕೆ ಪೀಟಿ ಹುಳ, ಕೊಡ್ತಿ ಹುಳ, ತೂಕದ ಹುಳ ಮುಂತಾದ ಅನೇಕ ಹೆಸರುಗಳಿವೆ. ಇವುಗಳ ರೆಕ್ಕೆ ಬಹುತೇಕ ಪಾರದರ್ಶಕವಾಗಿದ್ದು, ಅದರೊಳಗಿನ ನರಜಾಲ ಕಣ್ಣಿಗೆ ಕಾಣುವಂತಿರುತ್ತದೆ. ದೊಡ್ಡ ಸಂಯುಕ್ತ ಕಣ್ಣುಗಳು, ದೇಹದ ಗಾತ್ರಕ್ಕೆ ದೊಡ್ಡದೆಂದೇ ಕಾಣಿಸುವ ತಲೆ, ಈ ಹುಳಗಳ ಪ್ರಮುಖ ಲಕ್ಷಣ. ಗತಕಾಲದಲ್ಲಿ ಜೀವಿಸಿದ್ದ ಈ ಡ್ರಾಗನ್ ಫ್ಲೈಗಳ ಪಳೆಯುಳಿಕೆಗಳಲ್ಲಿ ಭಾರೀ ದೊಡ್ಡ ರೆಕ್ಕೆಗಳಿರುವ ಕುರುಹು ಕಂಡಿವೆ. ಇಂದು ಕಾಣುವ ಜೀವಿಗಳು ಚಿಕ್ಕ ಗಾತ್ರದವಾಗಿದ್ದು, ನೀರಲ್ಲಿ ಮೊಟ್ಟೆ ಇಡುತ್ತವೆ.

ಮರಿಹುಳುಗಳು ನೀರಲ್ಲೇ ಬೆಳೆದು ರೆಕ್ಕೆ ಬಲಿತ ಮೇಲೆ ಸಸ್ಯಗಳ ಮೇಲೆ, ಅಂತರಿಕ್ಷದಲ್ಲಿ ಜೀವನ ನಡೆಸುತ್ತವೆ.

ಭಾರತದಲ್ಲಿ ಒಡೊನಟಾ ಸ್ತರದ ಕೀಟಗಳಲ್ಲಿ ದಾರ್ಜೀಲಿಂಗ್ ಬಳಿಯ ಕೆಲವು ಸೀಮಿತ ಪ್ರದೇಶಗಳಲ್ಲಿ ಕಾಣಸಿಗುವ ಗ್ರೇಟ್ ಹಿಮಾಲಯನ್ ಡ್ರಾಗನ್ ಫ್ಲೈ ಅಥವಾ ಟಿಲ್‌ಯಾರ್ಡ್ಸ್ ಡ್ರಾಗನ್ ಫ್ಲೈ *(Epliophtebia laidlowi)* ಎಂಬುದು ಕ್ರಮೇಣ ಕಣ್ಮರೆಯಾಗುತ್ತಿದ್ದು, ಇದು ಅಳಿವಿನ ಅಂಚಿನಲ್ಲಿದೆಯೆಂದು ಪರಿಗಣಿಸಲಾಗಿದೆ.

## ದುಂಬಿಗಳು

### *(ಕೋಲಿಯೊಪ್ಟೆರಾ)*

ಕನ್ನಡ ಭಾಷೆಯಲ್ಲಿ ದುಂಬಿಗಳೂ, ಮಿಣುಕು ಹುಳಗಳೂ ಒಂದು ಮಟ್ಟದಲ್ಲಿ ರಸಿಕತೆಯ ದ್ಯೋತಕವಾಗಿವೆಯಾದರೂ, ಇಂಗ್ಲಿಷ್‌ನಲ್ಲಿ ಅವುಗಳನ್ನು ಕರೆದ 'ಬೀಟ್ಲ್' ಎಂಬ ಪದವೇ ಭೀತಿ ಹುಟ್ಟಿಸುವಂತಿದೆ. ಏಕೆಂದರೆ ಬೈಟೋಲ್ ಎಂಬ ಆಂಗ್ಲೊ – ಸ್ಯಾಕ್ಸನ್ ಮೂಲದ ಅರ್ಥ 'ಕಚ್ಚುವ ಹುಳ' ಎಂದಾಗುತ್ತದೆ. ಕಪ್ಪು ಕಂದು ಕವಚ ತೊಟ್ಟಂತೆ ಕಾಣುವ, ಮುಳ್ಳಿನ ಕಾಲುಗಳ, ಭಯಂಕರ ಸದ್ದಿನ ಈ ಜೀವಿಗಳು ಕೆಲವರಲ್ಲಿ ಭಯ ಹುಟ್ಟಿಸುತ್ತವೆಂಬುದೂ ಸುಳ್ಳಲ್ಲ. ಆದರೆ ಇವುಗಳಲ್ಲೇ ಮನಮೋಹಕ ಮಿಂಚುಬಣ್ಣಗಳ, ಸುಂದರ ಕಾಯದ ದುಂಬಿಗಳೂ ಇರುತ್ತವೆ.

ಅಂಥ ಕೆಲವು ದುಂಬಿಗಳನ್ನೂ ಕೀಟಗಳನ್ನೂ ಕೆಲವರು ಸಂತಸದಿಂದ ವೀಕ್ಷಿಸುತ್ತಾರೆ; ಸಂಗ್ರಹಿಸುತ್ತಾರೆ. ಕೆಂಪು ಕವಚದ, ಚಿನ್ನದ ಅಥವಾ ಚುಕ್ಕಿಗಳಿರುವ ಚಲಿಸುವ 'ಗುಲಗಂಜಿ'ಗಳು (ಲೇಡಿ ಬಗ್), ಬೆಳಕು ಹೊಮ್ಮಿಸುತ್ತ ಜಿಗಿಯುವ ಮಿಣುಕು ಹುಳುಗಳು ಅಂಥ ಕೆಲವು ಉದಾಹರಣೆಗಳು. ಪುರಾತನ ಈಜಿಪ್ಶಿಯನ್ ಜನರು ಸ್ಕಾರಾಬ್ *(Scarabaeus sacer)* ಎಂಬ ದುಂಬಿಯನ್ನು ಚಿರಂಜೀವಿಯ ಸಂಕೇತವೆಂದೇ ತಿಳಿದು ಪೂಜಿಸುತ್ತಿದ್ದರು.

ಕೆಲವು ದುಂಬಿಗಳು ನಮಗೆ ಉಪಕಾರಿ. ಅವು ನಮಗೆ ಕಾಟ ಕೊಡುವ ಕ್ರಿಮಿಕೀಟಗಳನ್ನು ಭಕ್ಷಿಸುತ್ತವೆ. ಇನ್ನು ಕೆಲವು ಝಾಡಮಾಲಿಗಳಂತೆ ಸತ್ತ ಸಣ್ಣ ಜೀವಿಗಳನ್ನು ಹೂಳುವ, ಕೊಳೆತದ್ದನ್ನು ಕಣ್ಮರೆ ಮಾಡಿ ಭೂಮಿಯನ್ನು ಶುಚಿಗೊಳಿಸುವ ಕೆಲಸದಲ್ಲಿ ತಲ್ಲೀನವಾಗಿರುತ್ತವೆ. ಆದರೆ ನಮಗೆ ಕಾಟ ಕೊಡುವ ಸಹಸ್ರಾರು ದುಂಬಿ ವಂಶಗಳು ಎಲ್ಲೆಂದರಲ್ಲಿ ಕಾಣಬರುತ್ತವೆ. ತೆಂಗಿಗೆ ಕಂಟಕ ಪ್ರಾಯವಾದ ಕಪ್ಪು ತಲೆ ದುಂಬಿಯಂತೆಯೇ ಪೈರು, ಧಾನ್ಯ, ಬಟ್ಟೆ, ಪೀಠೋಪಕರಣ, ಪಠ್ಯ ಪುಸ್ತಕಗಳನ್ನು ನಾಶ ಮಾಡುವ ಅದೆಷ್ಟೋ ಬಗೆಯ ಕೋಲಿಯೋಪ್ಟೆರಾಗಳನ್ನು ನಾವು ಪಟ್ಟಿ ಮಾಡಬಹುದು. ಅನೇಕ ಜೀವಿಗಳು ಇಲಿಗಳಿಗೆ, ಸಾಕು ಪ್ರಾಣಿಗಳಿಗೆ ಹಾಗೂ ಮನುಷ್ಯರಿಗೆ ಲಾಡಿ ಹುಳಗಳನ್ನೂ ನಾರುಹುಳಗಳನ್ನೂ ವರ್ಗಾಯಿಸಿ ರೋಗಪ್ರಸಾರಕ್ಕೂ ಕಾರಣವಾಗುತ್ತವೆ.

ಭಾರತದಲ್ಲಿ 'ಕರಾಬಿಡೇ' *(Carabidae)* ಕುಟುಂಬಕ್ಕೆ ಸೇರಿದ 'ಅಗೊನೊಟ್ರಿಕಸ್ ಅಂಡ್ರೆವೆಸಿ' *(Agonotrechus andrewesi)* 'ಅಮರಾ ಎಲಿಗನ್‌ಫುಲಾ *(Amara*

*elaganfula),* 'ಅಮರಾ ಬ್ರುಶೀ' *(Amara brucei),* 'ಬ್ರಾಸ್ಕೊಸೊಮಾ ಗ್ರೆಸ್ಯೆಲ್' *(Broscosoma gracile),* 'ಚೆನಿಯಸ್ ಕನರೇ' *(Chaenius kanarae),* 'ಕ್ಯಾಲಥಸ್ ಅಮರೈಡೆಸ್' *(Calathus amaroides)* ಮುಂತಾದ ದುಂಬಿಗಳು ತುಂಬ ಅಪರೂಪದ್ದೆನಿಸಿವೆ.

ಅಕಶೇರುಕ ಕೀಟ ಪ್ರಪಂಚದ ಬಗ್ಗೆ ನಮ್ಮಲ್ಲಿ ಸಾಕಷ್ಟು ಅಜ್ಞಾನವಿದೆ. ಯಾವುದು ಅಪರೂಪವಾಗುತ್ತಿದೆ, ಯಾವುದು ನಿರ್ವಂಶವಾಗುತ್ತಿದೆ, ಯಾವುದನ್ನು ಜೋಪಾನವಾಗಿ ಸಂರಕ್ಷಿಸಬೇಕೆಂಬುದನ್ನು ನಿರ್ಧರಿಸಲು ಬೇಕಾದ ಅಗತ್ಯ ಮಾಹಿತಿಗಳನ್ನು ನಾವಿನ್ನೂ ಕಲೆ ಹಾಕಬೇಕಾಗಿದೆ.



# ಸಂರಕ್ಷಣಾ ಯತ್ನಗಳು

ಎಲ್ಲ ಜೀವಿಗಳನ್ನು ಪ್ರೀತಿಯಿಂದ, ಗೌರವದಿಂದ ಹಾಗೂ ಪವಿತ್ರ ದೃಷ್ಟಿಯಿಂದ ಕಾಣಬೇಕೆಂಬ ತತ್ವ ನಮ್ಮ ಪುರಾತನ ಭಾರತೀಯ ಸಂಪ್ರದಾಯದಲ್ಲೇ ಅಂತರ್ಗತವಾಗಿದೆ. ವಿಪರ್ಯಾಸದ ಮಾತೆಂದರೆ, ಅದನ್ನೇ ಮತ್ತೆ ಮತ್ತೆ ಒತ್ತಿ ಹೇಳಿದ ಗೌತಮ ಬುದ್ಧ, ಅಶೋಕ ಹಾಗೂ ಮಹಾತ್ಮಾ ಗಾಂಧೀಜಿಯವರ ಈ ನಾಡಿನಲ್ಲೇ ಅದೆಷ್ಟೋ ಅಪರೂಪದ ಪ್ರಾಣಿ ಸಂಕುಲಗಳು ಅವಸಾನದ ಸ್ಥಿತಿ ತಲುಪಿವೆ. ನಮ್ಮ ನಾಗರಿಕತೆಯ ತಾಯಿಬೇರಿನಲ್ಲೇ ಸಂಚಿತವಾಗಿರುವ ಮೌಲ್ಯಗಳನ್ನು ನಾವಿಂದು ಮರೆತಿದ್ದೇವೆಯೆ? ನಮ್ಮ ಪೂರ್ವಿಕರು ತಮ್ಮ ಧರ್ಮದಲ್ಲಿ, ಸಂಸ್ಕೃತಿಯಲ್ಲಿ, ಕಲೆಯಲ್ಲಿ, ಜಾನಪದದಲ್ಲಿ ಅಷ್ಟೇ ಅಲ್ಲ, ದಿನನಿತ್ಯದ ಬದುಕಿನಲ್ಲಿ ರೂಢಿಗತ ಮಾಡಿಕೊಂಡಿದ್ದ ಪ್ರಾಣಿ ಸಂರಕ್ಷಣಾ ತತ್ವಗಳನ್ನು ನಾವಿಂದು ಗಾಳಿಗೆ ತೂರಿದ್ದೇವೆಯೆ? ಪ್ರಪಂಚದಲ್ಲಿ ಮೊಟ್ಟ ಮೊದಲನೆಯದೆನ್ನಬಹುದಾದ ಜೀವಿರಕ್ಷಣಾ ನಿಯಮಗಳನ್ನು ಸಾಮ್ರಾಟ್ ಅಶೋಕ ಕ್ರಿಸ್ತಪೂರ್ವ ಮೂರನೇ ಶತಮಾನದಲ್ಲೇ ಶಿಲಾಶಾಸನಗಳಲ್ಲಿ ಬರೆಯಿಸಿದ್ದ. ಅಂದಿನ ಕಾಲದ ಕಲೆಯಲ್ಲಿ, ಚಿತ್ರಗಳಲ್ಲಿ, ಪ್ರತಿಮೆಗಳಲ್ಲಿ, ವಾಸ್ತು ಶಿಲ್ಪಗಳಲ್ಲಿ ಹಾಗೂ 'ಪಂಚತಂತ್ರ' ಮತ್ತು 'ಹಿತೋಪದೇಶ'ದಂಥ ಸಾಹಿತ್ಯಗಳಲ್ಲಿ ಸಕಲ ಜೀವಾತ್ಮಗಳ ಸಂರಕ್ಷಣೆಯ ತತ್ವಗಳೂ ಮೌಲ್ಯಗಳೂ ಅಡಕವಾಗಿವೆ. ಅದೆಷ್ಟೋ ಶತಮಾನಗಳ ಹಿಂದೆ ಮನನಗೊಂಡ ಆ ಮೌಲ್ಯಗಳೆಲ್ಲ ಅಂದಿಗಿಂತ ಇಂದೇ ಹೆಚ್ಚು ಸಾಂದರ್ಭಿಕವೆನಿಸುತ್ತವೆ.

ಇಂದು ನಮ್ಮ ವನ್ಯ ಸಂಪತ್ತು ಇಷ್ಟೆಲ್ಲ ಶೀಘ್ರವಾಗಿ ನಶಿಸಲು ಮುಖ್ಯವಾಗಿ ಒಂದೇ ಒಂದು ಕಾರಣವನ್ನು ನೀಡಬಹುದು; ದಿನದಿನಕ್ಕೆ ಹೆಚ್ಚುತ್ತಿರುವ ಜನಸಂಖ್ಯೆಗೆ ಅಗತ್ಯವಾದ ಸಂಪನ್ಮೂಲಗಳನ್ನು ಎತ್ತಲೆಂದು ನಾವು ನಮ್ಮ ನೈಸರ್ಗಿಕ ಜೀವ

ಪರಿಸರವನ್ನು ಅತಿಯಾಗಿ ದೋಚುತ್ತಿದ್ದೇವೆ. ವನ್ಯ ಜೀವಿಗಳಿಗೆ ಬದುಕಲು ನೆಲೆಯೇ ಇಲ್ಲದಂತೆ ಅವುಗಳ ವಾಸಸ್ಥಾನಗಳನ್ನು ಧ್ವಂಸ ಮಾಡುತ್ತಿದ್ದೇವೆ. ಕೆಲಮಟ್ಟಿಗೆ ಇದು ಅನಿವಾರ್ಯವೆಂದು ಪರಿಗಣಿಸಬಹುದಾದರೂ, ಬೇಟೆಯ ತೆವಲಿಗಾಗಿ ಹಾಗೂ ವಾಣಿಜ್ಯ ವ್ಯವಹಾರಕ್ಕಾಗಿ ವನ್ಯ ಜೀವಿಗಳನ್ನು ಬಲಿ ಹಾಕಿರುವುದು ಮಾನವ ಆಸೆಗಳ ಪೂರೈಕೆಯ ಬದಲು ದುರಾಸೆಗಳ ಪೂರೈಕೆಗೆಂದೇ ಕೈಗೊಂಡ ಕೃತ್ಯಗಳೆನ್ನಬಹುದು.

ಹೀಗಿದ್ದರೂ ಸ್ವಾತಂತ್ರ್ಯಾನಂತರದ ಭಾರತದಲ್ಲಿ ವನ್ಯ ಜೀವಿಗಳ ಸಂರಕ್ಷಣೆಗೆ ಸಾಕಷ್ಟು ಕ್ರಮಗಳನ್ನು ಜಾರಿಗೆ ತರಲಾಗಿದೆ. ರಾಷ್ಟ್ರೀಯ ಉದ್ಯಾನಗಳ ಹಾಗೂ ಅಭಯಾರಣ್ಯಗಳ ಸ್ಥಾಪನೆ, ಅಪಾಯದ ಅಂಚಿಗೆ ಬಂದ ಪ್ರಾಣಿ ಸಂಕುಲಗಳ ಸಂರಕ್ಷಣೆಗೆ ವಿಶೇಷ ಯೋಜನೆಗಳು, ವನ್ಯಕ್ಷೇಮಕ್ಕಾಗಿ ಸಾಂಸ್ಥಿಕ ಅನುದಾನ, ಶಿಕ್ಷಣದ ಮೂಲಕ ವನ್ಯ ಪ್ರಾಣಿಗಳ ಕುರಿತು ಪ್ರಜ್ಞೆ ಬೆಳೆಸುವ ಯತ್ನ ಇವೇ ಮುಂತಾದ ಕಾರ್ಯಕ್ರಮಗಳನ್ನು ಇಲ್ಲಿ ಹೆಸರಿಸಬಹುದು.

## ರಾಷ್ಟ್ರೀಯ ಉದ್ಯಾನಗಳು ಮತ್ತು ಅಭಯಾರಣ್ಯಗಳು

ಭಾರತದಲ್ಲಿಂದು 69 ರಾಷ್ಟ್ರೀಯ ಉದ್ಯಾನಗಳ ಮತ್ತು 392 ಅಭಯಾರಣ್ಯಗಳ ದೊಡ್ಡ ಜಾಲವೇ ಇದೆ. ದೇಶದ ವಿವಿಧ ಭಾಗಗಳಲ್ಲಿ ರೂಪಿಸಲಾದ ಇಂಥ ಸುರಕ್ಷಿತ ತಾಣಗಳು ಒಟ್ಟು ದೇಶದ ಶೇಕಡಾ 4ರಷ್ಟು ಭೌಗೋಳಿಕ ಪ್ರದೇಶವನ್ನು ವ್ಯಾಪಿಸಿವೆ. ಅನೇಕ ವರ್ಷಗಳ ಸತತ ಸಂರಕ್ಷಣಾ ಯತ್ನ ಹಾಗೂ ಕಟ್ಟುನಿಟ್ಟಿನ ಉಸ್ತುವಾರಿಯ ಫಲವಾಗಿ, ವಿನಾಶದ ಅಂಚಿಗೆ ಬಂದಿರುವ ಅನೇಕ ಜೀವಿಗಳು ಇಂದು ಮತ್ತೆ ವಂಶಾಭಿವೃದ್ಧಿಯಲ್ಲಿ ತೊಡಗಿವೆ. ಅಂದರೆ, ಕೇವಲ ಈ ಪ್ರಾಣಿಗಳನ್ನಷ್ಟೇ ಅಲ್ಲ, ಅವುಗಳ ವಾಸಕ್ಷೇತ್ರವನ್ನೂ, ಸುತ್ತಮುತ್ತಲಿನ ಇಡೀ ಜೀವ ಪರಿಸರವನ್ನೂ ಮತ್ತೆ ಸುಸ್ಥಿತಿಗೆ ತರಲಾಗಿದೆ.

ನಮ್ಮ ದೇಶದ ಹಲವು ಅಮೂಲ್ಯ ಪ್ರಾಣಿ ಸಂಕುಲಗಳಿಗೆ ಈ ರಾಷ್ಟ್ರೀಯ ಉದ್ಯಾನ ಮತ್ತು ಅಭಯಾರಣ್ಯಗಳಲ್ಲಿ ಸಂರಕ್ಷಣೆ ಸಿಕ್ಕಿದೆ. ಉದಾಹರಣೆಗೆ ಹಾನಗಲ್ ಜಿಂಕೆ ಅಥವಾ ಕಾಶ್ಮೀರಿ ಕಡವೆಗಳಿಗೆ ಕಾಶ್ಮೀರದಲ್ಲಿ ದಾಚೀಗಾಮ್ ರಾಷ್ಟ್ರೀಯ ಉದ್ಯಾನವೇ ಅಂತಿಮ ಆಶ್ರಯತಾಣವಾಗಿದೆ. ಇದೇ ಉದ್ಯಾನದಲ್ಲಿ ಕಸ್ತೂರಿ ಮೃಗಗಳು ರಕ್ಷಣೆ ಪಡೆದಿದ್ದು, ಅವಸಾನದ ಅಂಚಿನಿಂದ ಇವು ಬದುಕಿ ಬಂದಂತಾಗಿದೆ. ಹಿಮಾಲಯದ ಇಳಿಜಾರಿನ ಗುಡ್ಡಗಳಲ್ಲಿ ಕಾರ್ಬೆಟ್ ಉದ್ಯಾನವಿದೆ. ಬ್ರಿಟಿಷರ ಕಾಲದಲ್ಲಿ ಮೊದಲು ಖ್ಯಾತ ಬೇಟೆಗಾರನಾಗಿದ್ದು ನಂತರ ಅಷ್ಟೇ ಖ್ಯಾತ ವನ್ಯ ಪ್ರೇಮಿಯಾಗಿ ಮಾರ್ಪಾಡುಗೊಂಡ ಜಿಮ್ ಕಾರ್ಬೆಟ್ ಎಂಬಾತನ ಹೆಸರಿನಲ್ಲಿ 1936ರಲ್ಲೇ ಸ್ಥಾಪಿತಗೊಂಡ ಈ ಉದ್ಯಾನ ನಮ್ಮ ದೇಶದ ಮೊಟ್ಟ ಮೊದಲ ರಾಷ್ಟ್ರೀಯ ಉದ್ಯಾನವಾಗಿದೆ. ಇಲ್ಲಿ ಆನೆ, ಹುಲಿ, ಚಿರತೆ ಮತ್ತು ವಿವಿಧ ವಂಶಗಳಿಗೆ ಸೇರಿದ ಜಿಂಕೆಗಳಿವೆ. ಅದೇ ಹಿಮಪರ್ವತ ಪಟ್ಟಿಯಲ್ಲಿ 'ದುಧ್ವಾ ರಾಷ್ಟ್ರೀಯ

ಉದ್ಯಾನ'ವಿದೆ. ಹುಲಿ, ಜವುಳು ಜಿಂಕೆ ಮತ್ತು ಕೃಷ್ಣಮೃಗಗಳಿಗೆ ಇದು ಆಶ್ರಯ ನೀಡಿದೆ. ಮಧ್ಯಪ್ರದೇಶದ 'ಕಾನ್ಹಾ ರಾಷ್ಟ್ರೀಯ ಉದ್ಯಾನ' ಹುಲಿ ಹಾಗೂ ಜವುಳು ಜಿಂಕೆಗಳಿಂದಾಗಿ ಪ್ರಸಿದ್ಧಿ ಪಡೆದಿದೆ.

ದಕ್ಷಿಣ ಭಾರತದ ಅನೇಕ ಕಡೆಗಳಲ್ಲಿ ನಿಸರ್ಗ ಸಂಪತ್ತಿನ ಅದ್ಭುತ ಭಂಡಾರವಿದ್ದಲ್ಲೆಲ್ಲ ರಕ್ಷಣೆಯ ವ್ಯವಸ್ಥೆ ಮಾಡಲಾಗಿದೆ. ಕರ್ನಾಟಕದ 'ಬಂಡೀಪುರ ರಾಷ್ಟ್ರೀಯ ಉದ್ಯಾನ'ಕ್ಕೆ ಹೊಂದಿಕೊಂಡೇ ತಮಿಳುನಾಡಿನ 'ಮುದುಮಲೈ ಅಭಯಾರಣ್ಯ' ಇದೆ. ಅಲ್ಲೇ ಪಕ್ಕದಲ್ಲಿ ಕೇರಳದ ಉತ್ತರಕ್ಕೆ 'ನಾಗರ ಹೊಳೆ ಅಭಯಾರಣ್ಯ' ಮತ್ತು ಪಶ್ಚಿಮಕ್ಕೆ 'ವೈನಾಡ್ ವನ್ಯಧಾಮ' ಕೂಡಾ ಇದೆ. ಹೀಗೆ ಒಟ್ಟಿಗೇ 1,000 ಚದರ ಕಿಲೊ ಮೀಟರುಗಳಿಗೂ ಹೆಚ್ಚು ವಿಸ್ತೀರ್ಣದ ಒಂದೇ ಸಂರಕ್ಷಿತ ಪ್ರದೇಶ ಇರುವುದರಿಂದ ಆನೆಗಳ ಓಡಾಟಕ್ಕೆ ಅತಿ ದೊಡ್ಡ ವಾಸ ಕ್ಷೇತ್ರ ಮೀಸಲಿಟ್ಟಂತಾಗಿದೆ. ಆನೆಗಳ ಜತೆ ಜತೆಗೇ ಕಾಡುಹಂದಿ, ಚಿರತೆ, ಮೂಷಕ ಚಿರತೆ, ಚುಕ್ಕೆ ಜಿಂಕೆ, ಕರಡಿ, ಕಾಡು ಬೆಕ್ಕು, ಸಿವೆಟ್ ಮತ್ತು ಟಾಡಿ ಬೆಕ್ಕುಗಳಂಥ ಕಿರಿಮಾರ್ಜಾಲಗಳೂ ವಾಸಿಸುತ್ತಿವೆ. ಕೇರಳದ 'ಪೆರಿಯಾರ್ ವನ್ಯಧಾಮ'ವೂ ಆನೆ, ಹುಲಿ, ಮತ್ತಿತರ ಮೃಗಗಳ ಇನ್ನೊಂದು ಅಭಯಾರಣ್ಯವಾಗಿದೆ.

ಭರತಪುರದ 'ಕೇವಲದೇವ್ ಘಾನಾ ರಾಷ್ಟ್ರೀಯ ಉದ್ಯಾನ' ವೆಂದರೆ ಏಷ್ಯಾದಲ್ಲೇ ಪ್ರಖ್ಯಾತ ಜಲಪಕ್ಷಿಗಳ ಅಭಯಧಾಮವೆಂದೆನಿಸಿದೆ. ಇಲ್ಲಿ ವಲಸೆ ಪಕ್ಷಿಗಳ ಹಾಗೂ ಸ್ಥಳೀಯ ಪಕ್ಷಿಗಳ ಸಹಸ್ರಾರು ಪ್ರಭೇದಗಳಿಗೆ ಆಶ್ರಯ ಸಿಕ್ಕಿದೆ. ಇಲ್ಲಿನ ವಿಶಾಲ ಜಲಾವೃತ ಅಕೇಶಿಯಾ ಅರಣ್ಯದಲ್ಲಿ ಪ್ರತಿ ವರ್ಷವೂ ಅಕ್ಟೋಬರ್‌ನಿಂದ ಡಿಸೆಂಬರ್ ನಡುವಣ ಅವಧಿಯಲ್ಲಿ ಸ್ಥಳೀಯ ಜಲಪಕ್ಷಿಗಳು – ಬಣ್ಣದ ಕೊಕ್ಕರೆ, ಓಪನ್‌ಬಿಲ್ಸ್, ಸ್ಪೂನ್ ಬಿಲ್ಸ್, ಬಿಳಿ ಐಬೀಸ್, ಡಾರ್ಟರ್ ಹಕ್ಕಿ, ಕೊರ್ಮೊರಾಂಟ್, ನೀರ್ಗೋಳಿ ಮತ್ತು ಬಕ ಪಕ್ಷಿಗಳು – ಗೂಡುಕಟ್ಟಿ ಮೊಟ್ಟೆ ಇಟ್ಟು ಮರಿ ಮಾಡುತ್ತವೆ. ಡಿಸೆಂಬರಿನಲ್ಲಿ ಚಳಿಗಾಲದ ಅತಿಥಿಗಳು ಬರತೊಡಗುತ್ತವೆ. ಇವುಗಳಲ್ಲಿ ಸೈಬೀರಿಯಾದ ಕೊಕ್ಕರೆಗಳು ಬಹುಮುಖ್ಯ. ಏಕೆಂದರೆ ಇಡೀ ಜಗತ್ತಿನಲ್ಲಿ ಈಗ ಕೇವಲ 400 ಪಕ್ಷಿಗಳು ಬದುಕುಳಿದಿವೆ. ಅಮೋಘ ರತಿನರ್ತನ ಪ್ರದರ್ಶಿಸುವ ಸಾರಸ್ ಕೊಕ್ಕರೆಗಳೂ ಇಲ್ಲಿಯೇ ವಾಸಿಸುತ್ತವೆ.

ಥಾರ್ ಮರುಭೂಮಿಯ 3,000 ಚದರ ಕಿಲೊಮೀಟರ್ ವಿಸ್ತೀರ್ಣದಲ್ಲಿ ವ್ಯಾಪಿಸಿರುವ 'ಮರುಭೂಮಿ ರಾಷ್ಟ್ರೀಯ ಉದ್ಯಾನ'ದಲ್ಲಿ ಅಳಿವಿನಂಚಿಗೆ ಬಂದ ಗ್ರೇಟ್ ಇಂಡಿಯನ್ ಬಸ್ಟರ್ಡ್ ಪಕ್ಷಿಗಳು ಆಶ್ರಯ ಪಡೆದಿವೆ. ಮರುಭೂಮಿಯ ತೋಳ, ಮರುಭೂಮಿಯ ಮಾರ್ಜಾಲ, ಮರುಭೂಮಿಯ ನರಿಗಳೂ ಇಲ್ಲಿ ಬದುಕುಳಿದಿವೆ. ಗುಜರಾತಿನ 'ಗಿರ್ ಸಿಂಹಧಾಮ'ವಂತೂ ಭಾರತದಲ್ಲಷ್ಟೇ ಅಲ್ಲ, ಇಡೀ ವಿಶ್ವದಲ್ಲೇ ಸಿಂಹಗಳ ಏಕೈಕ ಆಶ್ರಯತಾಣವಾಗಿದೆ. ಇಲ್ಲಿ ಸಿಂಹಗಳೊಂದಿಗೆ ಚಿರತೆ, ಚುಕ್ಕಿ ಜಿಂಕೆ, ಸಾಂಬಾರ್, ನೀಲಗಾಯ್, ನಾಲ್ಕು ಕೊಂಬಿನ ಚೌಸಿಂಗಾ, ಚಿಂಕಾರಾಗಳೂ, ಕತ್ತೆ ಕಿರುಬಗಳೂ ಬದುಕುತ್ತಿವೆ.

ಅಸ್ಸಾಂನಲ್ಲಿ ಬ್ರಹ್ಮಪುತ್ರಾ ನದಿಯ ದಡದಲ್ಲಿರುವ 'ಕಾಝಿರಂಗಾ ರಾಷ್ಟ್ರೀಯ

ಉದ್ಯಾನ'ದಲ್ಲಿ ಘೇಂಡಾಮೃಗಗಳೂ, ಕಾಡೆಮ್ಮೆ ಕಾಡುಕೋಣಗಳೂ ಹಾಯಾಗಿ ಬದುಕುತ್ತಿವೆ. ಅಸ್ಸಾಂನ ಮಾನಸ್ ರಕ್ಷಿತ ಅರಣ್ಯ ಹಾಗೂ ಭೂತಾನಿನ ಅರಣ್ಯ ಪ್ರದೇಶವನ್ನೂ ಸೇರಿಸಿದರೆ, ಅಳಿವಿನಂಚಿಗೆ ಬಂದ ಸ್ತನಿ ಪ್ರಾಣಿಗಳ ಹಾಗೂ ಪಕ್ಷಿಗಳ ಭಾರತದ ಅತಿ ದೊಡ್ಡ ಆಶ್ರಯಧಾಮವನ್ನು ಪಡೆದ ಕೀರ್ತಿ ಅಸ್ಸಾಂ ರಾಜ್ಯದ ಪಾಲಿಗೆ ದೊರೆತಂತಾಗಿದೆ. ಇಲ್ಲಿ ಆನೆ, ಘೇಂಡಾ, ಕಾಡೆಮ್ಮೆ ಕಾಟಿ, ಜವುಳು ಜಿಂಕೆ, ಕುಳ್ಳ ಹಂದಿ (ಪಿಗ್ಮಿ ಹಾಗ್), ಹಿಸ್ಪಿಡ್ ಮೊಲ, ಬಿಳಿಹುಬ್ಬಿನ ಗಿಬ್ಬನ್, ಬಂಗಾರದ ಲಂಗೂರ, ಅತಿ ದೊಡ್ಡ ಅಳಿಲು, ಹುಲಿ, ಚಿರತೆ, ಹೊಗೆ ಚಿರತೆ, ಬಿಂಟುರಾಂಗ್, ಕರಡಿ, ಘಡಿಯಾಲ್, ಹೆಬ್ಬಾವು ಮತ್ತು ಹಾರ್ನ್‌ಬಿಲ್ ಪಕ್ಷಿ ಎಲ್ಲವೂ ಕಾಣಸಿಗುತ್ತವೆ. ಅರುಣಾಚಲ ಪ್ರದೇಶದ 'ನಾಮ್ದಾಫಾ ರಾಷ್ಟ್ರೀಯ ಅಭಯಾರಣ್ಯ' ಭಾರತದ ಹುಲಿಗಳ ಪಾಲಿಗೆ ಪೂರ್ವ ದಿಕ್ಕಿನ ಅಂತಿಮ ಸೀಮೆಯೆನ್ನಬಹುದು. ಇಲ್ಲಿ ಕಾಟಿ, ಗೋರಲ್ ಮತ್ತು ಟಾಕಿನ್‌ಗಳೂ ವಾಸಿಸುತ್ತವೆ.

ಗಂಗಾ ಮತ್ತು ಬ್ರಹ್ಮಪುತ್ರಾ ನದಿಯ ಮುಖಜ ಭೂಮಿಯಲ್ಲಿ 2,585 ಚದರ ಕಿಲೊಮೀಟರ್ ವಿಸ್ತಾರ ಪ್ರದೇಶದಲ್ಲಿ ಪಶ್ಚಿಮ ಬಂಗಾಳದ 'ಸುಂದರಬನ್ ರಾಷ್ಟ್ರೀಯ ಉದ್ಯಾನ' ಇದೆ. ಜವುಗಿನ ಈ ಅತಿ ದೊಡ್ಡ ಕಾವಲು ಅರಣ್ಯದಲ್ಲಿ ಅದ್ಭುತವಾದ ರಾಯಲ್ ಬೆಂಗಾಲ್ ಹುಲಿಗಳ ತವರೂರಿದೆ. ಬಂಗಾಲ ಉಪಸಾಗರಕ್ಕೆ ಈ ಎರಡು ನದಿಗಳು ಕೂಡುವ ಅಳಿವೆಯ ಉಪ್ಪುನೀರಿನ ಪರಿಸರದಲ್ಲಿ ನೀರು – ನೆಲದ ಮಧ್ಯೆಯ ಉಭಯವಾಸಿ ಜೀವನಕ್ಕೆ ಒಗ್ಗಿಕೊಂಡ ಹುಲಿಗಳು ಇಲ್ಲಿವೆ.

## ಜೀವಮಂಡಲ ಭಂಡಾರ
## (ಬಯೋಸ್ಫಿಯರ್ ರಿಸರ್ವ್ಸ್)

ಅಭಯಾರಣ್ಯ, ರಕ್ಷಿತ ಅರಣ್ಯ, ರಾಷ್ಟ್ರೀಯ ಉದ್ಯಾನಗಳಿಗಿಂತ ವಿಶಾಲ ವ್ಯಾಪ್ತಿಯದಾದ 'ಜೀವಮಂಡಲ'ಗಳು ಯುನೆಸ್ಕೊ ಸಂಸ್ಥೆಯ ವಿಶೇಷ ಯೋಜನೆಯ ಅಡಿಯಲ್ಲಿ ಅಸ್ತಿತ್ವಕ್ಕೆ ಬಂದಿವೆ. ಒಂದು ಭೂಭಾಗದಲ್ಲಿ ಕಾಣಬರುವ ಎಲ್ಲ ಬಗೆಯ ವಿಶಿಷ್ಟ ಜೀವ ಸಂಕುಲಗಳನ್ನೂ ಇಡಿಯಾಗಿ ರಕ್ಷಿಸುವ, ಹಾಗೂ ಅವುಗಳ ವೈವಿಧ್ಯವನ್ನು ಕಾಪಾಡುವ ವಿಶಾಲ ಉದ್ದೇಶದಿಂದ ಭಾರತದಲ್ಲಿ ಈಗಾಗಲೇ ಇಂಥ ಏಳು ಜೀವ ಮಂಡಲಗಳನ್ನು ಸ್ಥಾಪಿಸಲಾಗಿದೆ. ಸ್ಥೂಲವಾಗಿ ಅವುಗಳ ಗುರಿ ಏನಿದೆಯೆಂದರೆ:

* ಸಸ್ಯ, ಪ್ರಾಣಿ ಮತ್ತು ಸೂಕ್ಷ್ಮ ಜೀವಿಗಳನ್ನೊಳಗೊಂಡ ಎಲ್ಲ ಬಗೆಯ ಜೀವಿಗಳನ್ನು ಸಂರಕ್ಷಿಸುವುದು;
* ಜೀವಜಾಲ ಸಂವರ್ಧನೆ ಹಾಗೂ ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಸಂಶೋಧನೆಗಳಿಗೆ ಅನುವು ಮಾಡಿಕೊಡುವುದು;

* ಶಿಕ್ಷಣ, ಪ್ರಜ್ಞಾವೃದ್ಧಿ ಹಾಗೂ ತರಬೇತಿಗೆ ಬೇಕಾದ ಅಗತ್ಯ ಸೌಲಭ್ಯಗಳನ್ನು ಒದಗಿಸುವುದು.

ಭಾರತದಲ್ಲಿ ಇಂಥ ಒಟ್ಟು 14ಪ್ರಾತಿನಿಧಿಕ ಜೀವಲೋಕಗಳನ್ನು 'ಜೀವ ಮಂಡಲ ಭಂಡಾರ'ದ ಪರಿಮಿತಿಯಲ್ಲಿ ತರಲು ಉದ್ದೇಶಿಸಲಾಗಿದೆ. ಈಗಾಗಲೇ ಸ್ಥಾಪಿತವಾದ ಏಳು 'ಜೀವ ಮಂಡಲ'ಗಳೆಂದರೆ ನೀಲಗಿರಿ, ನಂದಾದೇವಿ, ನೋಕ್‌ರೆಕ್, ಗ್ರೇಟ್ ನಿಕೊಬಾರ್, ಮನ್ನಾರ್ ಕೊಲ್ಲಿ, ಮಾನಸ ಮತ್ತು ಸುಂದರಬನ. ಇನ್ನುಳಿದವು – ನಾಮ್ದಾಫಾ, ಕಾನ್ಹಾ, ಉತ್ತರಖಂಡ, ಥಾರ್ ಮರುಭೂಮಿ, ಕಾಝಿರಂಗಾ, ಕಛ್ಛದ ಕಿರಿಗಣ ಮತ್ತು ಉತ್ತರ ಅಂಡಮಾನ್.

ಮನುಷ್ಯರ ಗಮನಕ್ಕೂ ಬಂದಿರದ ಅಪರೂಪದ ಜೀವಿಗಳೂ ಸೇರಿದಂತೆ ಅಪಾರ ಸಂಖ್ಯೆಯ ಎಲ್ಲ ಬಗೆಯ ಜೀವಿಗಳಿಗೂ ಇಲ್ಲಿ ಸಂರಕ್ಷಣೆ ಒದಗಿಸುವ ಗುರಿಯಿದೆ.

## ವಿಶೇಷ ಯೋಜನೆಗಳು

### ಹುಲಿ ಯೋಜನೆ

ಭಾರತದಲ್ಲಿ ಹುಲಿಗಳ ಸಂಖ್ಯೆ ತೀವ್ರ ಕುಸಿಯುತ್ತಿರುವುದನ್ನು ಮನಗಂಡು ಭಾರತೀಯ ವನ್ಯಜೀವಿ ಮಂಡಲಿಯವರು ಹುಲಿಗಳ ಸಂರಕ್ಷಣೆಗೆಂದು 1970ರಲ್ಲಿ ಒಂದು ವಿಶೇಷ ಕಾರ್ಯದಳವನ್ನು ಸಂಘಟಿಸಿದರು. ಇದರ ಪರಿಣಾಮವಾಗಿ 1973ರ ಏಪ್ರಿಲ್ 1ರಂದು ಈ ಮುಂದಿನ ಉದ್ದೇಶಗಳನ್ನಿಟ್ಟುಕೊಂಡು 'ಹುಲಿ ಯೋಜನೆ' ಅಸ್ತಿತ್ವಕ್ಕೆ ಬಂದಿದೆ:

* ಭಾರತದ ಸಾಂಸ್ಕೃತಿಕ, ವೈಜ್ಞಾನಿಕ, ಆರ್ಥಿಕ ಮೌಲ್ಯಗಳ ರಕ್ಷಣೆ, ಜೀವ ಪರಿಸರ ಸಮತೋಲ ಮತ್ತು ಸೌಂದರ್ಯೋಪಾಸನೆಗೆ ಅಗತ್ಯವಿದ್ದ ಪ್ರಮಾಣದಲ್ಲಿ ಹುಲಿಗಳ ಸಂಖ್ಯೆಯನ್ನು ಹೆಚ್ಚಿಸುವುದು;
* ಜನತೆಯ ಶಿಕ್ಷಣ ಮತ್ತು ಮನರಂಜನೆಯ ದೃಷ್ಟಿಯಿಂದ ಜೈವಿಕವಾಗಿ ಮಹತ್ವದ್ದೆನಿಸಿದ ಕ್ಷೇತ್ರಗಳನ್ನು ಭಾರತದ ಪರಂಪರೆಯೆಂಬಂತೆ ಶಾಶ್ವತವಾಗಿ ಸಂರಕ್ಷಿಸಿಡುವುದು.

ಈ ಮುಂದಿನ ತತ್ವಗಳನ್ನಾಧರಿಸಿ 1973–74ರಲ್ಲಿ ಒಟ್ಟು ಒಂಬತ್ತು 'ಹುಲಿ ಭಂಡಾರ'ಗಳನ್ನು ಸ್ಥಾಪಿಸಲಾಯಿತು.

* ಈ ಭಂಡಾರದ ಒಳವಲಯದಲ್ಲಿ ಮನುಷ್ಯನ ಹಸ್ತಕ್ಷೇಪವೇ ಇರದಂತಾಗಬೇಕು; ಹೊರವಲಯದಲ್ಲಿ ಮನುಷ್ಯನ ಚಟುವಟಿಕೆಗಳು ಪರಿಸರ ಸಂವರ್ಧನೆಗೆ ಧಕ್ಕೆ ತಾರದಂತಿರಬೇಕು.
* ಅಲ್ಲಿನ ಜೀವ ಮಂಡಲವನ್ನು ಮೊದಲಿದ್ದ ನೈಸರ್ಗಿಕ ಸ್ಥಿತಿಗೇ ಮರಳಿಸಲು

ಅಗತ್ಯ ಬೇಕಾದಷ್ಟು ರಿವೇರಿ ಕೆಲಸಕ್ಕಷ್ಟೇ ವಾಸಕ್ಷೇತ್ರದ ಉಸ್ತುವಾರಿ ಚಟುವಟಿಕೆಯನ್ನು ಸೀಮಿತಗೊಳಿಸಬೇಕು, ಮತ್ತು

* ವನ್ಯ ಜೀವಿಗಳ ಹಾಗೂ ಅವಕ್ಕೆ ಪೋಷಕವಾದ ವಾಸಕ್ಷೇತ್ರದ ವಿವಿಧ ಮುಖಗಳ ಬಗ್ಗೆ ಸಂಶೋಧನೆ ಮಾಡುವುದು ಹಾಗೂ ಅಲ್ಲಿನ ಸಸ್ಯ ಮತ್ತು ಪ್ರಾಣಿ ಜೀವನದಲ್ಲಾಗುವ ಬದಲಾವಣೆಗಳನ್ನು ಜಾಗರೂಕತೆಯಿಂದ ದಾಖಲಿಸುವುದು.

ಇಂದು ಭಾರತದ ಹದಿಮೂರು ರಾಜ್ಯಗಳಲ್ಲಿ ಒಟ್ಟು 18 ಹುಲಿ ಭಂಡಾರಗಳನ್ನು ಸ್ಥಾಪಿಸಲಾಗಿದೆ. ಈ ಎಲ್ಲವುಗಳ ಒಟ್ಟು ಕ್ಷೇತ್ರ ಸುಮಾರು 28,000 ಚದರ ಕಿಲೊಮೀಟರುಗಳಿಗಿಂತ ಹೆಚ್ಚಿದೆ.

ವನ್ಯಜೀವಿಗಳ ಸಂರಕ್ಷಣೆಗೆ ಭಾರತ ಕಟಿಬದ್ಧವಾಗಿದೆ ಎಂಬುದನ್ನು ಪ್ರತಿಬಿಂಬಿಸುವ ಈ 'ಹುಲಿಯೋಜನೆ' ನಾವು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದ ಯಶಸ್ವೀ ಸಂರಕ್ಷಣಾ ಕಾರ್ಯಕ್ರಮವಾಗಿದೆ. ಪ್ರಧಾನ ಮಂತ್ರಿಯವರ ಅಧ್ಯಕ್ಷತೆಯ ಕಾರ್ಯ ಸಮಿತಿಯೊಂದು ಈ ಹುಲಿಭಂಡಾರಗಳ ಉಸ್ತುವಾರಿಗೆ ಅಗತ್ಯವಾದ ಮಾರ್ಗದರ್ಶನ ನೀಡುತ್ತಿದೆ. ಹುಲಿಗಳ ವಾಸಕ್ಕೆ ಅವಶ್ಯಕವಾದ ಎಲ್ಲ ಜೀವಾತ್ಮಗಳಿಗೂ ಸಂರಕ್ಷಣೆ ಒದಗಿಸಿದ್ದರಿಂದ ಇಂದು ನಮ್ಮ ದೇಶದಲ್ಲಿ ಹುಲಿಗಳ ಸಂಖ್ಯೆ ಈ ಎರಡೇ ದಶಕಗಳಲ್ಲಿ ಇಮ್ಮಡಿಯಾಗಿದೆ.

## ಗಿರ್ ಸಿಂಹಧಾಮ ಯೋಜನೆ

ಹಿಂದೊಂದು ಕಾಲದಲ್ಲಿ ಉತ್ತರ ಮತ್ತು ಮಧ್ಯ ಭಾರತದ ಬಹಳಷ್ಟು ಭಾಗಗಳಲ್ಲಿ ಕಂಡುಬರುತ್ತಿದ್ದ ಸಿಂಹಗಳು ಈಗ ಗಿರ್ ಅರಣ್ಯಕ್ಕಷ್ಟೇ ಸೀಮಿತವಾಗಿವೆ. ಶತಾಯಗತಾಯ ಉಳಿದುಕೊಂಡ ಕೊನೆಯ 200 ಸಿಂಹಗಳಿಗೂ ಬೇಟೆಯ ಪ್ರಾಣಿಗಳ ಅಭಾವದಿಂದಾಗಿ ಹಾಗೂ ದನಕರುಗಳ ಸತತ ಮೇಯುವಿಕೆಯಿಂದಾಗಿ ಬದುಕು ದುರ್ಭರವಾಗಿತ್ತು. ಹಸಿವೆ, ರೋಗರುಜಿನ ಹಾಗೂ ಮನುಷ್ಯರ ಒತ್ತುವರಿಯಿಂದಾಗಿ ಇವೂ ನಶಿಸಿ ಹೋಗುವ ಭಯವಿತ್ತು. ಅವುಗಳ ಸಂರಕ್ಷಣೆಯ ಮಾರ್ಗಸೂಚಿಗಳೊಂದಿಗೆ ಗಿರ್ ಅರಣ್ಯ ಪ್ರದೇಶವನ್ನು ಗುಜರಾತ್ ಸರಕಾರ 1972ರಲ್ಲಿ ಅಭಯಾರಣ್ಯವನ್ನಾಗಿ ಮಾರ್ಪಡಿಸಲು ಒಂದು ಯೋಜನೆಯನ್ನು ಸಿದ್ಧಪಡಿಸಿತು. ಸಿಂಹಗಳ ಸಂರಕ್ಷಣೆ ಹಾಗೂ ಅಲ್ಲಿನ ಪರಿಸರ ಸಂವರ್ಧನೆಗೆ ಕೇಂದ್ರ ಸರಕಾರ ಸೂಕ್ತ ನೆರವು ನೀಡುತ್ತಿದೆ.

## ಹಿಮಾಲಯದ ಕಸ್ತೂರಿ ಜಿಂಕೆಗಳ ಯೋಜನೆ

ಕಸ್ತೂರಿ ಮೃಗ *(Moschus moschiferus)* ಸಹ ಹಿಂದೊಂದು ಕಾಲದಲ್ಲಿ ಹಿಮಾಲಯದ ತಪ್ಪಲಿನುದ್ದಕ್ಕೂ ಕಾಣಸಿಗುತ್ತಿತ್ತು. ಪರಿಮಳ ದ್ರವ್ಯ ಹಾಗೂ ಔಷಧಗಳ ತಯಾರಿಕೆಗೆಂದು ಅದರ ಸುಗಂಧ ಗ್ರಂಥಿಯ ಬೇಟೆಗಾರರ ಹಾವಳಿಯಿಂದಾಗಿ ಮತ್ತು ಆವಾಸನಾಶದಿಂದಾಗಿ ಕಸ್ತೂರಿ ಮೃಗಗಳ ಸಂಖ್ಯೆ

ಇತ್ತೀಚೆಗೆ ಗಣನೀಯವಾಗಿ ಇಳಿದಿತ್ತು. ಅಂತರರಾಷ್ಟ್ರೀಯ ನಿಸರ್ಗ ಸಂರಕ್ಷಣಾ ಸಂಘ (ಇಂಟರ್‌ನ್ಯಾಶನಲ್ ಯೂನಿಯನ್ ಫಾರ್ ಕನ್ಸರ್ವೇಶನ್ ಆಫ್ ನೇಚರ್ – ಐಯುಸಿಎನ್) ಮತ್ತು ಭಾರತ ಸ್ವರಕಾರದ ಜಂಟಿ ನೆರವಿನೊಂದಿಗೆ ಉತ್ತರ ಪ್ರದೇಶದ 'ಕೇದಾರನಾಥ ಅಭಯಾರಣ್ಯ'ದಲ್ಲಿ ಕಸ್ತೂರಿ ಮೃಗಗಳ ಸಂರಕ್ಷಣಾ ಯೋಜನೆ ಜಾರಿಗೆ ಬಂದಿದೆ.

## ಮಣಿಪುರದ ಜಿಂಕೆ ಯೋಜನೆ

ಪ್ರಪಂಚದ ಅತ್ಯಂತ ಅಪರೂಪದ ಸ್ತನಿಗಳಲ್ಲೊಂದೆಂದು ಪರಿಗಣಿತವಾದ ಮಣಿಪುರದ ಕಡವೆ *(cervus eldi eldi)* ಅಲ್ಲಿನ ಲೋಕ್‌ಟಾಕ್ ಸರೋವರದ ಆಗ್ನೇಯ ಭಾಗದಲ್ಲಿರುವ ಕೀಬುಲ್ ಲಾವ್‌ಜೋ ಪ್ರಾಂತಕ್ಕಷ್ಟೇ ಸೀಮಿತವಾಗಿದೆ. 1977ರ ವೇಳೆಗೆ ಈ ವಿಶಿಷ್ಟ ಮೃಗಗಳ ಸಂಖ್ಯೆ ಕೇವಲ 18ಕ್ಕೆ ಇಳಿದಿತ್ತು. ಇದು ಗೊತ್ತಾದ ಮೇಲೆ 1977ರಲ್ಲೇ ಆ ಪ್ರದೇಶವನ್ನು ರಾಷ್ಟ್ರೀಯ ಉದ್ಯಾನವೆಂದು ಘೋಷಿಸಿ, ಅಗತ್ಯವಿದ್ದ ಎಲ್ಲ ಸಂರಕ್ಷಣಾ ಕ್ರಮಗಳನ್ನು ಅಲ್ಲಿ ಜಾರಿಗೊಳಿಸಲಾಗಿದೆ.

## ಹಾನಗಲ್ ಯೋಜನೆ

ಕಾಶ್ಮೀರಿ ಕಡವೆ ಅಥವಾ 'ಹಾನಗಲ್' *(Cervus elaphus hanglu)* ಸಹ ವಿನಾಶದ ಅಂಚಿಗೆ ಬಂದಿರುವ ಸ್ತನಿ. ಇದರ ತಳಿಗಳು ದಾಚೀಗಾವ್ ವನ್ಯಧಾಮ ಹಾಗೂ ಹಿಮಾಚಲ ಪ್ರದೇಶ ಮತ್ತು ಜಮ್ಮು ಕಾಶ್ಮೀರದ ಕೆಲವು ಅತಿ ಪುಟ್ಟ ಪ್ರದೇಶಗಳಿಗೆ ಸೀಮಿತವಾಗಿವೆ. ದನ ಮತ್ತು ಕುರಿಗಳನ್ನು ಮೇಯಿಸಿದ್ದರಿಂದ ಇವುಗಳ ಆವಾಸನಷ್ಟವಾಗಿದ್ದಲ್ಲದೆ, ಬೇಟೆಗಾರರ ಹಾವಳಿಯಿಂದ ಇವು ಕ್ಷಚಿತ್ತಾಗಿ, 1970ರ ವೇಳೆಗೆ ಕೇವಲ 200 ರಷ್ಟು ಮಾತ್ರ ಉಳಿದಿದ್ದವು. ಐಯುಸಿಎನ್, ವಿಶ್ವ ನಿಸರ್ಗ ನಿಧಿ (WWF) ಮತ್ತು ಜಮ್ಮು – ಕಾಶ್ಮೀರ ಸರಕಾರಗಳು ಜಂಟಿಯಾಗಿ 'ಹಾನಗಲ್ ಯೋಜನೆ' ಎಂಬ ಹೆಸರಿನಲ್ಲಿ ಈ ಮೃಗಗಳ ಸಂರಕ್ಷಣಾ ಕಾರ್ಯ ಪ್ರಾರಂಭಿಸಿದವು. ಈ ಯೋಜನೆ ಸಾಕಷ್ಟು ಯಶಸ್ವಿಯಾದ ಫಲವಾಗಿ 1980ರ ವೇಳೆಗೆ ಕಾಶ್ಮೀರಿ ಕಡವೆಗಳ ಸಂಖ್ಯೆ 340 ಕ್ಕೇರಿದೆ.

## ಮೊಸಳೆ ಮರಿ ಯೋಜನೆ

ಭಾರತದಲ್ಲಿ ಕಾಣಸಿಗುವ ಮೂರೂ ವಂಶಗಳಿಗೆ ಸೇರಿದ ಮೊಸಳೆಗಳು – ಘಡಿಯಾಲ್ *(Gavialis gangeticus)*, ಮಗ್ಗರ್ *(Crocodylus palustris)* ಮತ್ತು ಉಪ್ಪು ನೀರಿನ ಮೊಸಳೆ *(Crocodylus porosus)* *1970*ರ ವೇಳೆಗೆ ತೀರಾ ಅಪರೂಪವಾಗಿದ್ದವು. ವಿಶ್ವ ಸಂಸ್ಥೆಯ ಅಭಿವೃದ್ಧಿ ಯೋಜನೆ (ಯುಎನ್‌ಡಿಪಿ) ಮತ್ತು ಭಾರತ ಸರಕಾರ ಸೇರಿ ಮೊಸಳೆ ಮರಿ ಮಾಡುವ ಯೋಜನೆಯೊಂದನ್ನು ಒರಿಸ್ಸಾದಲ್ಲಿ 1975ರಲ್ಲಿ ಪ್ರಾರಂಭಿಸಿದವು. ಇದೇ ಯೋಜನೆಯನ್ನು ಆನಂತರ ಉತ್ತರ ಪ್ರದೇಶ, ರಾಜಸ್ತಾನ, ಪಶ್ಚಿಮ ಬಂಗಾಲ, ತಮಿಳುನಾಡು, ಆಂಧ್ರಪ್ರದೇಶ,

ಗುಜರಾತ, ಕೇರಳ, ಮಧ್ಯ ಪ್ರದೇಶ, ಮಹಾರಾಷ್ಟ್ರ, ಅಂಡಮಾನ್, ಅಸ್ಸಾಂ, ಬಿಹಾರ್ ಮತ್ತು ನಾಗಾಲ್ಯಾಂಡ್‌ಗಳಿಗೂ ವಿಸ್ತರಿಸಲಾಗಿದೆ. ಈ ಮರಿ ಮಾಡುವ ಯೋಜನೆ ಮತ್ತು 12 ಮಕರ ಧಾಮಗಳಿಂದಾಗಿ ಇದೀಗ ಈ ಮೂರು ಬಗೆಯ ಮೊಸಳೆಗಳ ಸಂತತಿ ಸಾಕಷ್ಟು ವೃದ್ಧಿಯಾಗಿದೆ.

### ಆನೆ ಯೋಜನೆ

'ಹುಲಿ ಯೋಜನೆ' ಮಾದರಿಯಲ್ಲೇ ತುಸು ಹೆಚ್ಚು ಕಡಿಮೆ ಆನೆಗಳ ಸಂರಕ್ಷಣೆಗೂ ಒಂದು ರಾಷ್ಟ್ರವ್ಯಾಪೀ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ. ಆನೆಗಳ ಸಂಖ್ಯೆ ಅಷ್ಟೇನೂ ಗಣನೀಯವಾಗಿ ಇಳಿದಿಲ್ಲವಾದರೂ, ಮನುಷ್ಯರ ಕೃಷಿಕ್ಷೇತ್ರದ ಹಾಗೂ ಸರಕಾರಿ ಯೋಜನೆಗಳ ವಿಸ್ತರಣೆಯಿಂದಾಗಿ ಅವುಗಳ ಓಡಾಟಕ್ಕೆ ಇಕ್ಕಟ್ಟಾಗಿ ನೀರು, ಮೇವಿಗೆ ತೊಂದರೆಯಾಗುತ್ತಿದೆ. ಗ್ರಾಮೀಣ ಪ್ರದೇಶಕ್ಕೆ ಅವು ನುಗ್ಗುತ್ತಿವೆ. ಆನೆಗಳ ಆವಾಸವನ್ನು ಮೊದಲಿದ್ದ ಸ್ಥಿತಿಗೇ ತರಬೇಕು, ಜೀರ್ಣಗೊಂಡ ಅರಣ್ಯ ಪ್ರದೇಶಗಳನ್ನು ಊರ್ಜಿತಕ್ಕೆ ತರಬೇಕು; ಆನೆಗಳ ವಲಸೆ ಮಾರ್ಗಗಳ ಮರುಸ್ಥಾಪನೆ ಮಾಡಬೇಕು; ಮನುಷ್ಯರೊಂದಿಗೆ ಅವುಗಳ ಮುಖಾಮುಖಿ ತಪ್ಪಿಸಬೇಕು; ಅವುಗಳ ಸಂತಾನವೃದ್ಧಿ ಹಾಗೂ ವಲಸೆ ಪ್ರವೃತ್ತಿ ಕುರಿತಂತೆ ಸಂಪೂರ್ಣ ಮಾಹಿತಿ ಲಭಿಸುವಂತಾಗಬೇಕು – ಇವೇ ಮುಂತಾದ ಉದ್ದೇಶಗಳೊಂದಿಗೆ 'ಆನೆ ಯೋಜನೆ' ಕಾರ್ಯಾರಂಭವಾಗಿದೆ.

## ಶಾಸನಗಳು

### ಭಾರತೀಯ ವನ್ಯಜೀವಿ (ಸಂರಕ್ಷಣಾ) ಕಾಯಿದೆ, 1972

ಮೃಗ, ಪಕ್ಷಿ, ಸರೀಸೃಪ, ಉಭಯವಾಸಿಗಳು, ಕೀಟಗಳು ಅದರಲ್ಲೂ ವಿಶೇಷವಾಗಿ, ಅಳಿವಿನಂಚಿಗೆ ಬಂದ ವನ್ಯಜೀವಿಗಳಿಗೆ ರಕ್ಷಣೆ ನೀಡಲೆಂದು 1972ರಲ್ಲಿ ಸರ್ವವ್ಯಾಪೀ ಕೇಂದ್ರೀಯ ಶಾಸನವನ್ನು ಜಾರಿಗೆ ತರಲಾಗಿದೆ. ವನ್ಯ ಜೀವಿಗಳಿಗೆ ಕಾನೂನು ರೀತ್ಯಾ ರಕ್ಷಣೆ ಒದಗಿಸುವುದರ ಜತೆಗೇ ಅವುಗಳಿಗೊಂದು ರಾಷ್ಟ್ರೀಯ ಉದ್ಯಾನ ಹಾಗೂ ಅಭಯಾರಣ್ಯಗಳ ಸ್ಥಾಪನೆ ಮಾಡುವ ಮತ್ತು ಮೃಗಜನ್ಯ ಉತ್ಪನ್ನಗಳ ಸಾಗಣೆ ಹಾಗೂ ಮಾರಾಟವನ್ನು ನಿಷೇಧಿಸುವ ಅವಕಾಶಗಳನ್ನು ಈ ಕಾನೂನು ಸಂಹಿತೆಯಲ್ಲಿ ಕಲ್ಪಿಸಲಾಗಿದೆ.

ಈ ಕಾಯಿದೆಯಲ್ಲಿ ಐದು ತಪ್ಸೀಲುಗಳಿವೆ. ಅಪರೂಪದ ಹಾಗೂ ವಿನಾಶದಂಚಿನ ಪ್ರಾಣಿಗಳ ಪಟ್ಟಿಯನ್ನು ಇದರಲ್ಲಿ ಕೊಡಲಾಗಿದೆ. ಬೇಟೆಯ ತೀಟೆಗೆಂದೇ ಬಲಿಯಾಗುವ ವಿಶೇಷ ಮೃಗಗಳನ್ನು ಪ್ರತ್ಯೇಕ ಪಟ್ಟಿ ಮಾಡಲಾಗಿದ್ದು, ಬೇಟೆ ಮೃಗಗಳ ರಕ್ಷಣೆಗೆ ಕಟ್ಟುನಿಟ್ಟಿನ ನಿಯಮಾವಳಿಗಳನ್ನು ರೂಪಿಸಲಾಗಿದೆ.

ಈ ಕಾಯಿದೆಯಲ್ಲಿ ಆಗಾಗ ತಿದ್ದುಪಡಿಗೆ ಅವಕಾಶವಿದೆ. 1991ರ ಅಕ್ಟೋಬರ್ 2 ರಂದು ವಿಶೇಷ ತಿದ್ದುಪಡಿಯೊಂದನ್ನು ಮಾಡಲಾಗಿದೆ. ಇದು ವನ್ಯಮೃಗಗಳಿಗೆ ಹೆಚ್ಚಿನ ರಕ್ಷಣೆ ಕೊಡುತ್ತದಲ್ಲದೆ, ಕಾಯಿದೆಯನ್ನು ಉಲ್ಲಂಘಿಸಿದವರಿಗೆ ಉಗ್ರ ಶಿಕ್ಷೆಯನ್ನು ಶಿಫಾರಸು ಮಾಡುತ್ತದೆ. ಈ ತಿದ್ದುಪಡಿಯ ಪ್ರಕಾರ, ವನ್ಯಮೃಗಗಳ ಹತ್ಯೆಯ ವಿರುದ್ಧ ಸಾಮಾನ್ಯ ಪ್ರಜೆಗಳೂ ನೇರವಾಗಿ ನ್ಯಾಯಾಲಯದಲ್ಲಿ ದೂರು ಸಲ್ಲಿಸಬಹುದು. ಈ ಕಾಯಿದೆಯ ಒಂಬತ್ತನೇ ಪರಿಚ್ಛೇದದ ಪ್ರಕಾರ, ಒಂದನೇ, ಎರಡನೇ, ಮೂರನೇ ಮತ್ತು ನಾಲ್ಕನೇ ತಪ್ಸೀಲುಗಳಲ್ಲಿ ಹೆಸರಿಸಲಾದ ವನ್ಯಜೀವಿಗಳನ್ನು ಯಾವ ಕಾರಣಕ್ಕೂ ಬೇಟೆಯಾಡುವಂತಿಲ್ಲ. ಚರ್ಮ, ದಂತ, ಕೊಂಬು ಮುಂತಾದ ಮೃಗಜನ್ಯ ವಸ್ತುಗಳ ಸಾಗಾಟ, ಶೇಖರಣೆ, ಮಾರಾಟಗಳ ನಿರ್ಬಂಧಕ್ಕೆ ಮತ್ತು ವನ್ಯ ಹಂತಕರ ಶಿಕ್ಷೆಗೆ ಆಗತ್ಯವಾದ ಉಗ್ರ ಕ್ರಮಗಳನ್ನೂ ಈ ಕಾಯಿದೆಯಲ್ಲಿ ನಿರೂಪಿಸಲಾಗಿದೆ.

## ಅಂತರರಾಷ್ಟ್ರೀಯ ಒಪ್ಪಂದ (CITES)

ವನ್ಯ ಪ್ರಾಣಿ ಮತ್ತು ಸಸ್ಯಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ನಿರ್ಬಂಧಿಸಲೆಂದು ವಿವಿಧ ರಾಷ್ಟ್ರಗಳು 1975ರಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡಿವೆ. "ಅಳಿವಿನಂಚಿಗೆ ಬಂದಿರುವ ವನ್ಯ ಪ್ರಾಣಿ ಮತ್ತು ಸಸ್ಯಗಳ ಅಂತರರಾಷ್ಟ್ರೀಯ ವ್ಯಾಪಾರೀ ಒಪ್ಪಂದ" ಹೆಸರಿನ ಇದಕ್ಕೆ ಇಂಗ್ಲಿಷ್‌ನಲ್ಲಿ 'ಸೈಟ್ಸ್' *(Convention on International Trade in Endangered Species - CITES)* ಎನ್ನುತ್ತಾರೆ. ಭಾರತವೂ ಸಂಪೂರ್ಣ ಅನುಮೋದನೆಯೊಂದಿಗೆ ಇದಕ್ಕೆ ಸಹಿ ಹಾಕಿದ ರಾಷ್ಟ್ರಗಳಲ್ಲೊಂದಾಗಿದೆ. ಈ ಒಪ್ಪಂದದ ಪ್ರಕಾರ:

1. ಅಪ್ರತಿಮ ಸೌಂದರ್ಯ ಮತ್ತು ಬಹುವಿಧ ರೂಪಾಕಾರಗಳುಳ್ಳ ವನ್ಯಪ್ರಾಣಿ ಮತ್ತು ಸಸ್ಯಗಳು ಈ ಭೂಮಿಯ ನೈಸರ್ಗಿಕ ವ್ಯವಸ್ಥೆಯ ಮರುಭರ್ತಿ ಮಾಡಲಾಗದ ಅಂಗಗಳಾಗಿವೆ;
2. ವೈಜ್ಞಾನಿಕ, ಆರ್ಥಿಕ, ಸಾಂಸ್ಕೃತಿಕ, ಮನೋರಂಜಕ ಮತ್ತು ಸೌಂದರ್ಯೋಪಾಸನ ದೃಷ್ಟಿಯಿಂದ ವನ್ಯ ಪ್ರಾಣಿ ಮತ್ತು ಸಸ್ಯಗಳು ದಿನಗಳೆದಂತೆಲ್ಲ ಹೆಚ್ಚು ಹೆಚ್ಚು ಮಹತ್ವಪೂರ್ಣವಾಗುತ್ತಿವೆ.
3. ಆಯಾ ರಾಷ್ಟ್ರಗಳ ಪ್ರಜೆಗಳು ಮತ್ತು ಸರಕಾರಗಳೇ ತಂತಮ್ಮ ನೆಲದ ವನ್ಯ ಸಂಪತ್ತನ್ನು ಉಳಿಸಿಕೊಳ್ಳುವಲ್ಲಿ ಸಮರ್ಥರಾಗಿರುತ್ತಾರೆ; ಉಳಿಸಿಕೊಳ್ಳಲೇಬೇಕು;
4. ಆದರೆ ಅಂತಾರಾಷ್ಟ್ರೀಯ ಮಾರಾಟ ಜಾಲದಿಂದಾಗಿ ನಶಿಸುತ್ತಿರುವ ಕೆಲವು ಅಮೂಲ್ಯ ವನ್ಯ ಪ್ರಾಣಿ ಮತ್ತು ಸಸ್ಯಗಳ ಸಂರಕ್ಷಣೆಗೆ ಅಂತಾರಾಷ್ಟ್ರೀಯ ಮಟ್ಟದ ಸಹಕಾರ ಅತ್ಯಗತ್ಯವಿದೆ; ಮತ್ತು
5. ಈ ಗುರಿ ಸಾಧನೆಗೆ ತುರ್ತಾಗಿ ಕ್ರಮಗಳನ್ನು ಕೈಗೊಳ್ಳಬೇಕಾದ ಕಾಲ ಸನ್ನಿಹಿತವಾಗಿದೆ.

ವನ್ಯ ಸಂಪತ್ತಿನ ಕಳ್ಳಸಾಗಣೆಯನ್ನು ಒಂಟೊಂಟಿ ರಾಷ್ಟ್ರಗಳು ತಾವಾಗಿ ನಿರ್ಬಂಧಿಸಲು ಕಷ್ಟಸಾಧ್ಯ. ಬೇರೆ ಬೇರೆ ದೇಶಗಳ ಸಹಯೋಗವಿದ್ದರೆ ಈ ಕೆಲಸ ಸುಲಭವಾಗುತ್ತಾದ್ದರಿಂದ 'ಸೈಟ್ಸ್' ಸಂಹಿತೆ ಈ ನಿಟ್ಟಿನಲ್ಲಿ ಅತ್ಯಂತ ಮಹತ್ವದ ಹೆಜ್ಜೆಯೆನ್ನಬಹುದು.

## ಸಂರಕ್ಷಣಾ ಪ್ರಜ್ಞೆಯ ಬಿತ್ತನೆ

ಒಂದಿಷ್ಟು ವನ್ಯ ಪ್ರಾಣಿಗಳು ನಿರ್ವಂಶವಾದರೆ ಅಥವಾ ಅಳಿವಿನಂಚಿಗೆ ಬಂದರೆ ನಮಗೇನಾಗಬೇಕಿದೆ? ಭಾರತದ 'ಚೀತಾ' ಪೂರ್ತಿಯಾಗಿ ಅಳಿದಿರಲಿ, ಅಥವಾ ಏಷ್ಯಾಟಿಕ್ ಸಿಂಹಗಳು ಕಣ್ಮರೆಯಾಗುವತ್ತ ಸಾಗಿರಲಿ, ಆ ಕುರಿತು ನಾವೇಕೆ ತಲೆ ಕೆಡಿಸಿಕೊಳ್ಳಬೇಕು? 'ಹುಲಿ ಯೋಜನೆ'ಗಾಗಿ ಅದೆಷ್ಟೋ ಕೋಟಿ ರೂಪಾಯಿ ವೆಚ್ಚ ಮಾಡುವಲ್ಲಿ ಅರ್ಥವಿದೆಯೇ? ಈ ವಿಧವಾದ ಏಕೆ, ಏನು, ಹೇಗೆ ಮುಂತಾದ ಪ್ರಶ್ನೆಗಳನ್ನು ಎತ್ತಿ ಉತ್ತರಿಸುವುದರಿಂದಲೇ ವನ್ಯ ರಕ್ಷಣೆಯ ಮಹತ್ವದ ಬಗ್ಗೆ ಸಾರ್ವಜನಿಕರಲ್ಲಿ ಪ್ರಜ್ಞೆ ಮೂಡಿಸಲು ಸಾಧ್ಯವಿದೆ. ಜೀವಿ ವೈವಿಧ್ಯದ ಮಹತ್ವದ ಅರಿವು ಮೂಡಲಿಕ್ಕೆ, ಜೀವಿ-ಜೀವಿಗಳ ಮಧ್ಯೆಯ ಸಂಬಂಧಗಳು ನಿಸರ್ಗದ ಸಮತೋಲನ ಕಾಯ್ದುಕೊಳ್ಳಲು ಹೇಗೆ ಅವಶ್ಯಕ ಎಂಬುದನ್ನು ತಿಳಿಯಲಿಕ್ಕೆ ಹಾಗು ಪ್ರಾಕೃತಿಕ ಜಗತ್ತಿನ ಮೇಲೆ ಮನುಷ್ಯನ ಪ್ರಭಾವ ಹೇಗಾಗುತ್ತಿದೆ ಎಂಬುದನ್ನು ಮನಗಾಣಲಿಕ್ಕೆ ಈ ಪ್ರಶ್ನೆಗಳನ್ನೆತ್ತುವುದು ಅಗತ್ಯವಾಗುತ್ತದೆ.

ಜೀವಿ ಸಂರಕ್ಷಣೆಯ ಕುರಿತಂತೆ ಶಿಕ್ಷಣ ಹಾಗೂ ಅರಿವು ಮೂಡಿಸುವ ಕಾರ್ಯ ಇಂದು ಶಾಲಾ ಕಾಲೇಜು ಮಟ್ಟದಲ್ಲಿ ಹಾಗೂ ಸಮುದಾಯದ ಅನೌಪಚಾರಿಕ ಮಟ್ಟದಲ್ಲೂ ನಡೆಯಬೇಕಾಗಿದೆ. ಶಾಲೆ ಕಾಲೇಜುಗಳಲ್ಲಿ ಇಕಾಲಜಿ, ಪರಿಸರ ಸಮತೋಲ, ವನ್ಯ ಸಂರಕ್ಷಣೆಯಂಥ ವಿಷಯಗಳು ಬಹುಮಟ್ಟಿಗೆ ಪಠ್ಯಪುಸ್ತಕದ ಪಾಠಗಳಾಗಿ ಪರೀಕ್ಷೆಯ ಪ್ರಶ್ನೋತ್ತರಗಳಾಗಿಯೇ ಮುಗಿದುಹೋಗುವ ಸಂಭವವಿರುತ್ತದೆ. ಇದು ಹೀಗಾಗದಂತೆ, ಸಮುದಾಯದ ಹಂತದಲ್ಲಿ ಅನೌಪಚಾರಿಕ ಶಿಕ್ಷಣವೂ ಅಗತ್ಯವಿದೆ. ಮಕ್ಕಳು, ಹದಿಹರೆಯದವರು, ದೊಡ್ಡವರು, ಶಿಕ್ಷಕರು, ಆಡಳಿತ ನಡೆಸುವವರು ರಾಜಕಾರಣಿಗಳು ಹಾಗೂ ಯೋಜನಾ ತಜ್ಞರಲ್ಲೂ ಇಂದು ವನ್ಯ ಸಂರಕ್ಷಣೆಯ ಮಹತ್ವದ ಬಗ್ಗೆ ಜಾಗೃತಿ ಮೂಡಬೇಕಿದೆ.

ಈ ದೃಷ್ಟಿಯಲ್ಲಿ, ಮುಂದಿನ ಪೀಳಿಗೆಗೂ ಇಂದಿನ ಸಂದೇಶವನ್ನು ತಲುಪಿಸಬಲ್ಲ ಎಳೆಯರು ಹಾಗೂ ಯುವಕರಲ್ಲಿ ಪ್ರಜ್ಞೆ ಮೂಡಿಸುವುದು ಅಗತ್ಯವಾಗುತ್ತಿದೆ. ಪರಿಸರ ಸಂರಕ್ಷಣೆಯ ಮಹತ್ವ ಹಾಗೂ ವನ್ಯಜೀವಿಗಳ ಉಳಿವಿನ ಬಗೆಗೆ ಅವರಲ್ಲಿ ಮೊದಲು ಕಳಕಳಿ ಹಾಗೂ ಜಾಗೃತಿ ಉಂಟಾಗುವಂತೆ ಮಾಡಬೇಕಿದೆ. ಇದು ಪಠ್ಯಪುಸ್ತಕಗಳ ಶಿಕ್ಷಣವೊಂದರಿಂದಲೇ ಸಾಧ್ಯವಾಗುವುದಿಲ್ಲ. ಇದಕ್ಕೆ ಅನೌಪಚಾರಿಕ ಶಿಕ್ಷಣವೂ ಬೇಕೆಂದಾದರೆ, ಅದಕ್ಕೆಂದೇ ಸೂಕ್ತ ಮಾಧ್ಯಮಗಳನ್ನು ಕಲ್ಪಿಸಬೇಕಾಗಿದೆ.

ಪತ್ರಿಕೆಗಳು, ರೇಡಿಯೊ, ಟಿವಿ, ರಾಷ್ಟ್ರೀಯ ಉದ್ಯಾನಗಳು, ಅಭಯಾರಣ್ಯಗಳು, ಪ್ರಾಣಿ ಸಂಗ್ರಹಾಲಯಗಳು ಮತ್ತು ನಿಸರ್ಗಚರಿತ್ರಾ ಸಂಗ್ರಹಾಲಯಗಳು ವನ್ಯ ಸಂರಕ್ಷಣೆಯ ಕುರಿತು ಜನ ಜಾಗೃತಿ ಮೂಡಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

ನಿಸರ್ಗದ ಚಮತ್ಕಾರಗಳನ್ನು ಅರ್ಥ ಮಾಡಿಕೊಳ್ಳುವುದು ಹಾಗೂ ಪ್ರಕೃತಿ ವೈಚಿತ್ರ್ಯಗಳ ಬಗ್ಗೆ ಗೌರವ ಭಾವ ತಾಳುವುದು ವನ್ಯ ಸಂರಕ್ಷಣೆಯ ಮೂಲಭೂತ ಅಗತ್ಯವಾಗಿದೆ. ಅನೇಕರು ತಮಗೆ ದಿನನಿತ್ಯ ಕಾಣಸಿಗುವ ಸಸ್ಯ ಮತ್ತು ಪ್ರಾಣಿಗಳ ಹೆಸರುಗಳನ್ನು ಅರಿತಿರಬೇಕೆಂಬ ಕುತೂಹಲವನ್ನು ತೋರುವುದಿಲ್ಲ. ಅವುಗಳ ಬಗ್ಗೆ ಕುತೂಹಲ ನಮ್ಮಲ್ಲಿ ಮೂಡಬೇಕು. ನಿಸರ್ಗದಲ್ಲಿ ಅವುಗಳ ಪಾತ್ರವೇನು ಎಂಬುದರ ಬಗ್ಗೆ ಶೋಧಬುದ್ಧಿ ನಮ್ಮಲ್ಲಿ ಜಾಗೃತವಾಗಬೇಕು. ನಮ್ಮ ವೀಕ್ಷಣಾಶಕ್ತಿ ಚುರುಕಾಗಬೇಕು. ಮನುಷ್ಯನೂ ಸೇರಿದಂತೆ ಎಲ್ಲ ಪ್ರಾಣಿಗಳೂ ಸಸ್ಯಗಳೂ ಪರಸ್ಪರ ಸಹಕಾರದಿಂದ ಬದುಕಿದರೆ ಮಾತ್ರ ಇಡೀ ಭೂಮಿಯ ಜೀವಜಾಲ ಸುವ್ಯವಸ್ಥಿತವಾಗಿರುತ್ತದೆಂಬ ಪ್ರಜ್ಞೆ ಹಾಗೂ ನಿಸರ್ಗದ ಬಗ್ಗೆ ಪ್ರೀತಿಯ ಚಿಲುಮೆ ಇದ್ದರೆ ಮಾತ್ರ ಸಂರಕ್ಷಣೆಗೆ ಪ್ರೇರಣೆ ಸಿಗುತ್ತದೆ.

## ನಾವೇನು ಮಾಡಬೇಕು ?

ನಮ್ಮ ದೇಶದಲ್ಲಿ ವಂಶ ವಿಹೀನವಾಗುತ್ತಿರುವ ಹಾಗೂ ಅಳಿವಿನಂಚಿಗೆ ಬಂದಿರುವ ಪ್ರಾಣಿಗಳ ಸಂರಕ್ಷಣೆಗೆ ನಾನು, ನೀವು, ನಾವೆಲ್ಲ ಸೇರಿ ಏನು ಮಾಡಬೇಕು ? ಒಬ್ಬೊಬ್ಬ ವ್ಯಕ್ತಿ ಏನು ತಾನೆ ಮಾಡಲು ಸಾಧ್ಯ ? ಎಂದು ನಮ್ಮಲ್ಲಿ ಬಹಳಷ್ಟು ಮಂದಿ ಕೈಚೆಲ್ಲಿ ಕೂತಿರುತ್ತಾರೆ. ಒಬ್ಬೊಬ್ಬ ವ್ಯಕ್ತಿಯೂ ಈ ನಿಟ್ಟಿನಲ್ಲಿ ಅದೆಷ್ಟು ಮಹತ್ವದ ಕೊಡುಗೆ ನೀಡಬಹುದೆಂಬುದನ್ನು ಅನೇಕರು ಮನಗಂಡಿಲ್ಲ. ಸಾರ್ವಜನಿಕರ ಸಹಕಾರ ಇಲ್ಲದಿದ್ದರೆ ವನ್ಯಜೀವಿ ರಕ್ಷಣೆಯ ಅದೆಷ್ಟೋ ಬಿಗಿ ಕಾನೂನುಗಳೂ ವ್ಯರ್ಥವಾಗುತ್ತವೆ. ವನ್ಯಜೀವಿಗಳ ಉಳಿವಿಗಾಗಿ ಶ್ರಮಿಸುವ ಸರಕಾರಿ ಇಲಾಖೆಗಳೂ, ಸಂಘಸಂಸ್ಥೆಗಳೂ ಪ್ರಜೆಗಳ ಬೆಂಬಲವಿದ್ದರೆ ಮಾತ್ರ ತಮ್ಮ ಕೆಲಸವನ್ನು ಉತ್ತಮ ರೀತಿಯಲ್ಲಿ ನಿಭಾಯಿಸುತ್ತವೆ. ಮೊದಲನೆಯದಾಗಿ ವನ್ಯ ಜೀವಿಗಳ ನಾಶಕ್ಕೆ ಕಾರಣವಾಗುವ ಯಾವ ಪ್ರಚೋದಕ ಕೃತ್ಯಗಳೂ ನನ್ನಿಂದ ಘಟಿಸಕೂಡದೆಂದು ನಾವು ನಿರ್ಧರಿಸಬೇಕು. ಅದಕ್ಕೆಂದು ನಮ್ಮ ಸ್ವಂತದ್ದೇ ಆದ ನೀತಿ ಸಂಹಿತೆಯೊಂದನ್ನು ನಾವು ರೂಪಿಸಿಕೊಳ್ಳಬೇಕು. 'ವನ್ಯಮೃಗಗಳ ಬೇಟೆಯನ್ನು ನಾನು ಕ್ರೀಡೆಯೆಂದು ಪರಿಗಣಿಸುವುದಿಲ್ಲ; ವನ್ಯಮೃಗಗಳ ಚರ್ಮ, ತುಪ್ಪಳ, ದಂತ, ಕೊಂಬು, ಕೋಡು, ಪರಿಮಳ ದ್ರವ್ಯ, ಕವಚಗಳಿಂದ ತಯಾರಾದ ಯಾವುದೇ ಬಗೆಯ ಕೋಟು, ಬೆಲ್ಟು, ಆಭರಣ ಅಥವಾ ಅಲಂಕಾರಿಕ, ಶೋಕಿ ವಸ್ತುಗಳನ್ನು ನಾನು ಬಳಸುವುದಿಲ್ಲ' ಎಂಬ ಪ್ರಾಥಮಿಕ ಪ್ರಜ್ಞೆ ನಮ್ಮಲ್ಲಿ ಮೂಡಬೇಕು. ಬಳಕೆದಾರರು ಈ ವಸ್ತುಗಳನ್ನು ವೈಯಕ್ತಿಕ ಮಟ್ಟದಲ್ಲಿ ನಿಷೇಧಿಸದಿದ್ದರೆ ವನ್ಯಮೃಗಗಳ ಬೇಟೆ ಹಾಗೂ ಕಳ್ಳಸಾಗಣೆ ಎಂದೂ ನಿಲ್ಲಲಾರದು. ಹೀಗೆ ಒಬ್ಬೊಬ್ಬರೂ ತಂತಮ್ಮ ಸಂರಕ್ಷಣಾ ನೀತಿಯನ್ನು ಪಾಲಿಸುತ್ತಲೇ, ಗೆಳೆಯರಿಗೆ, ಮನೆ

ಜನಕ್ಕೆ, ಬಂಧುಗಳಿಗೆ, ಹಿತೈಷಿಗಳಿಗೆ ಹಾಗೂ ಇಡೀ ಸಮುದಾಯಕ್ಕೆ ಈ ಸಂದೇಶವನ್ನು ಬಿತ್ತರಿಸಬೇಕಾಗಿದೆ.

ನಮ್ಮ ಅದೃಷ್ಟಕ್ಕೆ, ಸರಕಾರೀ ಮಟ್ಟದಲ್ಲೂ ವನ್ಯ ಸಂರಕ್ಷಣೆ ಕುರಿತಂತೆ ಸಮರ್ಥ ಧ್ಯೇಯಧೋರಣೆ ರೂಪಿತವಾಗಿದೆ. ಸರಕಾರ ಈ ನಿಟ್ಟಿನಲ್ಲಿ ಕಟಿಬದ್ಧವಾಗಿದೆ. ಸಂರಕ್ಷಣೆಯ ಕೆಲಸ ಪರಿಣಾಮಕಾರಿ ಆಗುವಂತೆ ಸಾಕಷ್ಟು ಕಾನೂನುಗಳು ರೂಪಿತವಾಗಿವೆ. ಸಾಂಘಿಕ ನೆರವು ಸಿಗುತ್ತಿದೆ. ಆಡಳಿತಾತ್ಮಕ ವ್ಯವಸ್ಥೆ ಲಭ್ಯವಿದೆ. ವನ್ಯ ಸಂರಕ್ಷಣಾ ಕಾರ್ಯದಲ್ಲಿ ಪಳಗಿದ ಅನೇಕರು ನಮ್ಮಲ್ಲಿದ್ದಾರೆ. ಪುರಾತನ ಕಾಲದಿಂದ ಹಿಡಿದು ಇತ್ತೀಚಿನ ದಿನಗಳವರೆಗೂ ನಾವು ಸಂರಕ್ಷಣಾ ಕಾರ್ಯವನ್ನು ಅತ್ಯುತ್ತಮ ವಿಧಾನದಲ್ಲಿ ಪಾಲಿಸಿಕೊಂಡು ಬಂದಿದ್ದೇವೆ; ಅಳಿವಿನಂಚಿನ ಪ್ರಾಣಿಗಳ ವಂಶೋದ್ಧಾರ ಮಾಡಲು ಸಾಧ್ಯವೆಂಬುದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದೇವೆ. ಸಾರ್ವಜನಿಕರಲ್ಲಿ ಪ್ರಜ್ಞೆ ಮೂಡಿಸಲು ಟೊಂಕ ಕಟ್ಟಿದ ಅನೇಕ ಸ್ವಯಂ ಪ್ರೇರಿತ ಸಂಸ್ಥೆಗಳೂ, ಕಾರ್ಯ ತಂಡಗಳೂ ಚುರುಕಾಗಿ ಕೆಲಸ ಮಾಡುತ್ತಿವೆ. ಆದರೂ ಈ ಯಾವುವೂ ಸಾಲುತ್ತಿಲ್ಲ. ನಾವು ಕ್ರಮಿಸಬೇಕಾದ ಹಾದಿ ಬಹಳಷ್ಟಿದೆ!

"ಸಂರಕ್ಷಣೆಯ ನಮ್ಮ ಈ ಯತ್ನಗಳೆಲ್ಲ ಪೂರ್ತಿ ವಿಫಲವಾಗುವ ಸಾಧ್ಯತೆಯಿದೆ. ಆದರೂ ನಾವು ಯಶಸ್ವಿಯಾಗಲು ಬೇಕಾದ ಮಾರ್ಗೋಪಾಯಗಳು ಇಂದು ಹಿಂದೆಂದಿಗಿಂತ ವಿಪುಲವಾಗಿವೆ" ಎಂದು 1979ರಲ್ಲಿ ಕೆನಡಾದ ಟೊರಾಂಟೊದಲ್ಲಿ ನಡೆದ ಉತ್ತರ ಅಮೆರಿಕದ 44ನೇ ವನ್ಯಜೀವಿ ಮತ್ತು ನಿಸರ್ಗ ಸಂಪನ್ಮೂಲ ಸಮ್ಮೇಳನದಲ್ಲಿ ಐಯುಸಿಎನ್‌ನ ಹಿಂದಿನ ಮಹಾನಿರ್ದೇಶಕ ಡೇವಿಡ್ ಎ. ಮನ್ರೊ 'ವನ್ಯ ಜೀವಿ ಸಂಪನ್ಮೂಲ ಸಂರಕ್ಷಣೆಯ ಮಾರ್ಗೋಪಾಯ' ಎಂಬ ವಿಷಯದ ಬಗ್ಗೆ ಮಾತಾಡುತ್ತ ಹೇಳಿದ್ದರು. ನಿಸರ್ಗ ಸಂರಕ್ಷಣೆಯ ಈ ಆಧುನಿಕ ಮಾರ್ಗೋಪಾಯಗಳನ್ನು ಚಾಕಚಕ್ಯತೆಯಿಂದ ಬಳಸಿಕೊಳ್ಳುವುದರಲ್ಲಿ ಹಾಗೂ ವನ್ಯರಕ್ಷಣೆಯನ್ನು ಒಂದು ಸಾಮಾಜಿಕ ಚಳವಳಿಯನ್ನಾಗಿ ಮಾಡುವುದರಲ್ಲಿ ಭವಿಷ್ಯದ ನಮ್ಮ ಯಶಸ್ಸಿನ ಸೂತ್ರಗಳು ಅಡಗಿವೆ. ಕಳೆದ ಎರಡು ದಶಕಗಳಲ್ಲಿ ವನ್ಯ ಸಂರಕ್ಷಣೆಯ ಮಾರ್ಗದಲ್ಲಿ ಭಾರತ ನಡೆಸಿದ ಪ್ರಯತ್ನಗಳಿಗೆಲ್ಲ ಅಪರಿಮಿತ ಯಶ ಸಿಕ್ಕಿದೆ. ಭವಿಷ್ಯದ ಬಗ್ಗೆ ನಾವು ಆಶಾಭಾವನೆ ತಳೆಯಬಹುದಾಗಿದೆ.

# ಆಕರ ಸೂಚಿ


Ali, Salim (1979): *The Book of Indian Birds*, Bombay Natural History Society, Bombay.

Anderson, Stanley H. (1991): *Managing Our Wildlife Resources*, Prentice Hall, Englewood Cliffs, New Jersey

Brander, A.A. Dunbar (1982): *Wild Animals in Central India*, Natraj Publishers, Dehradun.

Cox, James A. (1975): *The Endangered Ones*, Crown Publishers Inc., New York.

Daniel, J. C. (1983): *The Book of Indian Reptiles*, Bombay Natural History Society, Bombay.

Ditmars, R. L. (1989): *Reptiles of the World*, Falcon, New Delhi.

Duffery, Eric (1970): *Conservation of Nature*, Collins Publishers, London & Mc Graw Hill, New York.

Ehrlich, Paul and Anne (1981): *Extinction - The Causes and Consequences of the Disappearance of Species*, Victor Gollencz Ltd., London.

Gabrielson, Ira N. (1959): *Wildlife Conservation*, Macmillan Co., London.

Guide, Andrew (1981, 1986): *The Human Impact on the Natural Environment*, Basil Blackwell Ltd., UK.

Murthy, T. S. N. (1986): *The Snake Book of India*, International Book Distributors, Dehradun.

Natraj Publishers: *The India Wildlife (Protection) Act*, 1972 (pub. 1990), Dehradun.

National Geographic (1981) *Book of Mammals*, Vol. I & II, National Geographic Society, Washington D. C.

Negi, S. S. (1985): *Himalayan Wildlife - An Introduction*, Bishen Singh, Mahendra Pal Singh, Dehradun.

Osmaton, B. B. & Sale, J. B. (1989): *Wildlife of Dehradun and Adjacent Hills*, Natraj Publishers, Dehradun.

Owen, Oliver S. (1985): *Natural Resource Conservation - An Ecological Approach* (4th ed.), Macmillan Pub. Co., New York and Collier Macmillan Pub., London.

Prater, S. H. (1965): *The Book of Indian Animals*, Bombay Natural History Society, Bombay.

Peek, M. James (1986): *A Review of Wildlife Management*, Prentice Hall, Englewood Cliffs, New Jersey.

Saharia, V. B. (1982): *Wildlife in India*, Natraj Publishers, Dehradun.

Sankhala, Kailash (1978): *Tiger - The Story of the Indian Tiger*, Rupa & Co., Calcutta.

Scott, Sir Peter (1978): *Successes in Wildlife Conservation - Back from the Brink*, Hutchinson, London.

Tikader, B. K. (1983): *Threatened Animals of India*, Zoological Survey of India, Calcutta.

Time Life Books (1974): *Vanishing Species*, New York.

---

Laser Typeset at Laser Line Graphics, Bangalore
and Printed at M/s Paramount Graphics, New Delhi